# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ತಂದೆ ತಾಯಿಯರಿಂದ ಹಿಡಿದು ಸಮೀಪದವರೆನಿಸುವಂತಹ ಹಿತಚಿಂತಕರಂತೆ ಮಾತಾಡುವವರೆಲ್ಲಾ ಎಷ್ಟೊಂದು ಸ್ವಾರ್ಥಿಗಳೆಂಬುದು ಈ ಸಂಚಿಕೆಯಲ್ಲಿ ಬೇತಾಳವು ಹೇಳುವ "ನಾಗಕನ್ಯೆ" ಕಥೆಯಿಂದ ಗೊತ್ತಾಗುತ್ತದೆ. ಆದರಂತೆ ತಮ್ಮ ಸುತ್ತುಮುತ್ತಲಿರುವವರಿಗಿಂತಲೂ ಹೆಚ್ಚಿನ ಪ್ರತಿಭಾಶಾಲಿ ತಾನೆಂದುಕೊಂಡು ಪ್ರವರ್ತಿಸಿ ಮತಿವಂತರ ಚಾಣಕ್ಯೆಯಿಂದ ಬೇಸ್ತು ಬೀಳುವವನ ಚೆಂದವನ್ನು "ನಿಜರೂಪ" ಎಂಬ ಕಥೆಯಲ್ಲಿ ನೋಡಬಹುದು.

## ಅಮರವಾಣಿ

ಸ್ಥಾನಭ್ರಷ್ಟಾ ನ ಶೋಭಂತೇ ದಂತಾಃ ಕೇಶಾ ಸ್ತಥಾ ನಖಾಃ
ಗಜಂ ಚಮರ ಶಾರ್ದೂಲೌ ಹಿತ್ವಾ ಯತ್ರ ಗೌರವಮ್

ತಮ್ಮ ಸ್ಥಾನವನ್ನು ಬಿಟ್ಟುಬಿಟ್ಟರೆ, ಹಲ್ಲುಗಳಿಗೂ, ಕೂದಲಿಗೂ, ಉಗುರುಗಳಿಗೂ ಶೋಭೆಯಿರದು. ಆದರೆ ಯಥಾ ಸ್ಥಾನವನ್ನು ಬಿಟ್ಟ ಆನೆಯ ದಂತಗಳಿಗೂ, ಹುಲಿಯುಗುರುಗಳಿಗೂ ಬಹಳ ಗೌರವವಿರುತ್ತದೆ.

ಸಂಪುಟ : ೭೬ ಮಾರ್ಚಿ '೮೬ ಸಂಚಿಕೆ : ೩

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦



# ಚಂದಮಾಮನ ಹರಟೆ



## ಅತ್ಯಂತ ದೂರದ ನಕ್ಷತ್ರ ಮಂಡಲ

ಅಮೆರಿಕಾ ಖಗೋಳ ಶಾಸ್ತ್ರಜ್ಞರು ಭೂಮಿಗೆ ಸುಮಾರು ೧೪–೫ ಲಕ್ಷ ಕೋಟಿ ಕಾಂತಿ ಸಂವತ್ಸರಗಳಷ್ಟು ದೂರದಲ್ಲಿರುವ ಒಂದು ನಕ್ಷತ್ರ ಮಂಡಲ ವನ್ನು ಕಂಡುಹಿಡಿದಿರುವರು. ಬಾರ್ಕ್ಲೀ ವಿಶ್ವವಿದ್ಯಾಲಯಕ್ಕೆ ಸೇರಿದ ಪ್ರೊಫೆಸರ್ ಬೈರನ್ ಸ್ಪಿನ್‌ರಾಡ್ ಈ ಸಂಗತಿಯನ್ನು ತಿಳಿಸುತ್ತ ಭೂಮಿಗೆ ಅತ್ಯಂತ ದೂರದಲ್ಲಿರುವ ನಕ್ಷತ್ರ ಮಂಡಲವು ಇದೇ ಎಂದು ಅಭಿಪ್ರಾಯ ಪಡುವರು.

## ಕರುಣೆ ತೋರಿಸಿದ ಆನೆ

ಆಂಧ್ರ ಪ್ರದೇಶದ ಚಿತ್ತೂರು ಜಿಲ್ಲೆಯಲ್ಲಿ ಒಬ್ಬ ರೈತನು ಕಬ್ಬಿನ ತೋಟ ವನ್ನು ಕಾವಲು ಕಾಯುತ್ತ, ತೋಟದಲ್ಲಿ ಹೊಕ್ಕು ಮೇಯುವ ಆನೆಯನ್ನು ನೋಡಿ ಎಮ್ಮೆ ಎಂದುಕೊಂಡು ದೊಣ್ಣೆಯಿಂದ ಹೊಡೆದನು. ಆನೆ ಕೋಪದಿಂದ ಅವನನ್ನು ಸೊಂಡಿಲಿನಿಂದ ಹಿಡಿದು ಮೇಲಕ್ಕೆ ಎತ್ತಿತು. ಆದರೆ ವೃದ್ಧನಾದ ಆ ರೈತನು ಆನೆಗೆ ಕೈಗಳನ್ನೆತ್ತಿ ನಮಸ್ಕರಿಸುತ್ತ ಕಾಪಾಡುವಂತೆ ಪ್ರಾರ್ಥಿಸಿದಾಗ, ಆನೆ ಕರುಣೆಯಿಂದ ಅವನನ್ನು ಮೆಲ್ಲಗೆ ಕೆಳಗೆ ಬಿಟ್ಟು ಹೊರಟುಹೋಯಿತು.





## ಸಂಗೀತ ಕಚೇರಿಯಲ್ಲಿ ಹೊಚ್ಚ ಹೊಸ ರಿಕಾರ್ಡ್

ಶ್ರೀರಂಗಂ ದೇವಾಲಯದ ಪ್ರಾಂಗಣದಲ್ಲಿ ನಡೆದ ಸಂಗೀತ ಕಚೇರಿಯಲ್ಲಿ ಹೊಸದೊಂದು ಚರಿತ್ರೆ ಸೃಷ್ಟಿಸಲ್ಪಟ್ಟಿತು. ಇತ್ತೀಚೆಗೆ ನಾಗೈ ಮುರಳೀ ಧರನ್ ಎಂಬ ಸಂಗೀತ ವಿದ್ವಾಂಸನು ೨೫ ಗಂಟೆಗಳವರೆಗೆ ನಿಲ್ಲಿಸದೆ ಪಿಟೀಲು ಬಾರಿಸಿದನು. ಆತನ ಪಕ್ಕದಲ್ಲಿ ಕೆ. ರಾಜಾರಾಮನ್ ಮೃದಂಗ ಬಾರಿಸಿದನು.

# ನಿಮಗೆ ಗೊತ್ತೇ?

೧. ಮೊತ್ತಮೊದಲು ಉತ್ತರ ಧ್ರುವವನ್ನು ಸೇರಿದವರಾರೆಂದು ನಿಮಗೆ ಗೊತ್ತಿದೆಯೇ ?

೨. ದಕ್ಷಿಣ ಧ್ರುವವನ್ನು ಮೊತ್ತಮೊದಲು ತಲಪಿದವರು ಯಾರು ?

೩. ನ್ಯೂಜೀಲಾಂಡನ್ನು ಯಾರು ಕಂಡುಹಿಡಿದರು?

೪. ಒಂದೇ ಯಾತ್ರೆಯಲ್ಲಿ ಪ್ರಪಂಚವನ್ನು ಸುತ್ತಿ ಬಂದ ಮೊತ್ತಮೊದಲಿನ ಆಂಗ್ಲೇಯ ನಾವಿಕನು ಯಾರೆಂದು ತಿಳಿದಿದ್ದೀರಾ ?

೫. ಆಫ್ರಿಕಾ ಪ್ರಯಾಣ ಸಮಯದಲ್ಲಿ ಡೇವಿಡ್ ಲಿವಿಂಗ್ ಸ್ಟೋನ್ ಕಂಡುಹಿಡಿದ ಸುಪ್ರಸಿದ್ಧವಾದ ಜಲಪಾತವು ಯಾವುದೆಂದು ಅರಿತಿರುವಿರಾ ?

(ಉತ್ತರ ೬೫ ನೇ ಪುಟದಲ್ಲಿ)

ಪುರಾಣ ಗಾಥಾವಳಿ :

# ಅನಸೂಯೆ

ಅತ್ರಿ ಮಹಾ ಮುನಿಯ ಪತ್ನಿ ಅನಸೂಯೆ. ಅವಳು ಪರಮ ಪತಿವ್ರತೆಯಾಗಿ, ಎಲ್ಲರ ಮೇಲೆಯೂ ಪ್ರೇಮಾನುರಾಗಗಳನ್ನು ತೋರಿಸುವ ಮಾತೃಮೂರ್ತಿಯಾಗಿ ಹೆಸರು ಪಡೆದಿದ್ದಳು.

ಅವಳ ಪಾತಿವ್ರತ್ಯವನ್ನೂ, ಮಾತೃ ಹೃದಯವನ್ನೂ ಮೂರು ಲೋಕಗಳಿಗೂ ತೋರಿಸಬೇಕೆಂದು ಬ್ರಹ್ಮ, ವಿಷ್ಣು, ಮಹೇಶ್ವರರು ಸಂಕಲ್ಪಿಸಿದರು. ಆ ತ್ರಿಮೂರ್ತಿಗಳೂ ಬ್ರಾಹ್ಮಣ ರೂಪದಲ್ಲಿ ಅತ್ರಿಮುನಿಯ ಆಶ್ರಮಕ್ಕೆ ಬಂದರು. ಅನಸೂಯೆ ಭಕ್ತಿ ಶ್ರದ್ಧೆಗಳಿಂದ ಅವರಿಗೆ ಅತಿಥಿ ಮರ್ಯಾದೆಗಳನ್ನು ಮಾಡಿ, ಏನು ಬೇಕೆಂದು ಕೇಳಿದಳು.

"ನಾವು ನಿನ್ನ ಕುಟೀರದಲ್ಲಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಳ್ಳಬೇಕೆಂದಿದ್ದೇವೆ. ನಾವು ಮೂವರನ್ನೂ ಮಡಿಲಿಗೆ ಎತ್ತಿಕೊಂಡು ನೀನು ಜೋಗುಳ ಹಾಡಬೇಕು. ಅದೇ ನಮಗೆ ಬೇಕಾದುದು" ಎಂದರು ಮೂವರೂ ಏಕ ಕಂಠದಿಂದ.

ಅದನ್ನು ಕೇಳಿ ಅನಸೂಯೆ ಸಣ್ಣಗೆ ನಕ್ಕು, "ಹಾಗೆಯೇ ಆಗಲಿ ಅಪ್ಪಗಳಿರಾ! ನಿಮ್ಮಿಷ್ಟದಂತೆ ಬನ್ನಿ" ಎಂದು ಅವರ ಮೇಲೆ ನಾಲ್ಕು ಅಕ್ಷತೆ ಕಾಳುಗಳನ್ನು ತಳಿದು ಕೈಗಳನ್ನು ಚಾಚಿದಳು.

ಮರುಕ್ಷಣವೇ ಆ ಮೂವರೂ ಶಿಶುಗಳಾಗಿ ಮಾರ್ಪಟ್ಟರು. ಅನಸೂಯೆ ಆಪ್ಯಾಯತೆಯಿಂದ ಒಬ್ಬೊಬ್ಬರನ್ನೂ ತನ್ನ ಮಡಿಲಲ್ಲಿ ಮಲಗಿಸಿ ಮಾತೃಪ್ರೇಮದಿಂದ ಹಾಲು ಕುಡಿಸಿ ಜೋಗುಳ ಹಾಡಿ ಲಾಲಿಸಿದಳು.

ಅನಸೂಯೆಯ ಮಹಿಮೆಗಳಿಗೆ ಮುಗ್ಧರಾದ ತ್ರಿಮೂರ್ತಿಗಳು, ನಿಜರೂಪ ತಾಳಿದ ಮೇಲೆ, ಬೇಕಾದ ವರವನ್ನು ಕೇಳುವಂತೆ ಹೇಳಿದರು. ಅವರು ಮೂವರೂ ತಮ್ಮ ಹೊಟ್ಟೆಯಲ್ಲಿ ಹುಟ್ಟಬೇಕೆಂದು ಅವಳು ವರ ಕೇಳಿದಳು. ಸ್ವಲ್ಪ ಕಾಲದ ಮೇಲೆ ಅವಳಿಗೆ ಬ್ರಹ್ಮನ ಅಂಶದಲ್ಲಿ ಸೋಮನೂ, ವಿಷ್ಣು ಅಂಶದಿಂದ ದತ್ತಾತ್ರೇಯನೂ, ಶಿವನ ಅಂಶದಿಂದ ದೂರ್ವಾಸನೂ ಹುಟ್ಟಿದರು.

ಅನಂತರದ ಕಾಲದಲ್ಲಿ ಸೀತಾ ರಾಮ ಲಕ್ಷ್ಮಣರು ಅತ್ರಿಯ ಆಶ್ರಮವನ್ನು ದರ್ಶನ ಮಾಡಿದರು. ಆಗ ಅನಸೂಯೆ ಸೀತೆಗೆ ನೀತಿ ಧರ್ಮಗಳನ್ನು ಉಪದೇಶಮಾಡಿ, ಬಾಡದ ಹೂವುಗಳನ್ನೂ ಕಾಣಿಕೆಯಾಗಿ ಕೊಟ್ಟಳು.





# ನಿಜರೂಪ

ಹಿಂದೆ ಚತುರಂಗಪುರವನ್ನು ಆಳಿಕೊಂಡಿದ್ದ ರಾಜಾ ಚಂದ್ರಹಾಸನಿಗೆ, ರಾಜಗುರುವಾಧ ರುದ್ರಾಕ್ಷನ ಮೇಲೆ ಅತ್ಯಂತ ಭಕ್ತಿ ಗೌರವಗಳಿದ್ದುವು. ಅದಕ್ಕೆ ಮುಖ್ಯ ಕಾರಣವೇನೆಂದರೆ, ಚಂದ್ರಹಾಸನು ದಾಯಾದಿಗಳಿಂದ ಅನೇಕ ತೊಂದರೆಗಳಿಗೆ ಗುರಿಯಾದಾಗ, ರುದ್ರಾಕ್ಷನು ಅವನಿಗೆ ತಕ್ಕ ತಕ್ಕ ಕಾಲದಲ್ಲಿ ತಕ್ಕ ತಕ್ಕ ಸಲಹೆಗಳನ್ನು ಹೇಳಿ, ಸಿಂಹಾಸನದ ರಕ್ಷಣೆಗೆ ತುಂಬಾ ಸಹಾಯಕನಾಗಿದ್ದನು. ಆದುದರಿಂದ ಅವನ ಮೇಲೆ ಅತ್ಯಂತ ಕೃತಜ್ಞತೆ ತುಂಬಿಕೊಂಡಿದ್ದಿತು.

ಸರ್ವಸಂಗ ಪರಿತ್ಯಾಗಿ ಎಂದು ಹೇಳಲ್ಪಡುವ ರುದ್ರಾಕ್ಷನಲ್ಲಿ ವಿಪರೀತವಾದ ಅಹಂಕಾರವಿದ್ದಿತು. ಆತನು ಕಾಷಾಯ ವರ್ಣದಲ್ಲಿರುವ ಪಟ್ಟೆ ಪೀತಾಂಬರಗಳನ್ನೇ ಧರಿಸಿಕೊಳ್ಳುತ್ತಿದ್ದನು. ಕೊರಳಲ್ಲಿ ರತ್ನಹಾರವು ಅಲಂಕರಿಸಿಕೊಂಡಿರುತ್ತಿತ್ತು. ಕೈಗಳಲ್ಲಿ ಬಂಗಾರದ ಕಂಕಣಗಳನ್ನು ಹಾಕಿಕೊಂಡು ಬಹಳ ಆಡಂಬರವಾಗಿ ಕಾಣಿಸುತ್ತಿದ್ದನು. ರಾಜನ ಹತ್ತಿರ ತನಗಿರುವ ಸಲಿಗೆಯ ಕಾರಣದಿಂದ ಮಂತ್ರಿಗಳನ್ನೂ, ಇತರ ಆಸ್ಥಾನದ ಉದ್ಯೋಗಸ್ಥರನ್ನೂ ಸಣ್ಣ ದೃಷ್ಟಿಯಿಂದ ನೋಡಿ ಅವಮಾನ ಪಡಿಸುತ್ತಿದ್ದನು. ರಾಜನ ಇಷ್ಟದವನಾದುದರಿಂದ ಯಾರೂ ಬಾಯಿ ಎತ್ತುತ್ತಿರಲಿಲ್ಲ. ಆದರೆ ಎಲ್ಲರಿಗೂ ಅವನ ಮೇಲೆ ಒಳಗೊಳಗೇ ಅಸಹ್ಯವಿದ್ದಿತು.

ಒಂದು ದಿನ ರುದ್ರಾಕ್ಷನು ರಾಜಾ ಚಂದ್ರಹಾಸನೊಂದಿಗೆ, "ರಾಜಾ, ನಿನಗೆ ನನ್ನ ಮೇಲಿರುವ ಭಕ್ತಿ ಗೌರವಗಳ ಸಂಗತಿ ಎಲ್ಲರಿಗೂ ಗೊತ್ತಿದೆ. ಆದರೆ ಮುಂದಿನ ತಲೆಮಾರಿನವರು ಕೂಡಾ ಆ ಸಂಗತಿಯನ್ನು ಗುರುತಿಸಿಕೊಳ್ಳಲಿಕ್ಕಾಗಿ ನನ್ನದೊಂದು ಶಿಲಾ ವಿಗ್ರಹವನ್ನು ನಗರದೊಳಗಿನ ನಾಲ್ಕು ಬೀದಿಗಳು ಸೇರುವ ಜಾಗದಲ್ಲಿ ಪ್ರತಿಷ್ಠಿಸಿಬಿಡೇನು! ಹಾಗೆ ಮಾಡಿದರೆ ನೀನು ನನ್ನ ಮೇಲೆ ಎಷ್ಟೊಂದು ವಿಧೇಯತೆಯಿಂದ ಗೌರವಿಸುವಿಯೆಂದು ಚಿರಸ್ಥಾಯಿಯಾಗಿರುತ್ತದೆ. ಮುಂದಿನ ತಲೆಮಾರಿನವರೂ ಹಿರಿಯರನ್ನು ಹೇಗೆ ಗೌರವಿಸಬೇಕೆಂಬುದಕ್ಕೆ ಆದರ್ಶ ಶಿಲ್ಪವಾಗಿರುತ್ತದೆ" ಎಂದನು.

ಚಂದ್ರಹಾಸ ರಾಜನು ಆಗಲಿ ಎಂದು ಅದಕ್ಕೆ ಒಪ್ಪಿ, ಮಂತ್ರಿ ಮಾರ್ತಾಂಡನೊಂದಿಗೆ, ರಾಜಗುರುವಿನ ಅಭಿಲಾಷೆಯನ್ನು ಹೇಳಿ, "ಇದಕ್ಕೆ ನೀವು ಮೊದಲು ಪ್ರಸಿದ್ಧ ಶಿಲ್ಪಿಗಳನ್ನು ಕುರಿತು ವಿಚಾರಿಸಿರಿ.

ಜೆ. ಜೆ. ರತ್ನ



ಅವರಲ್ಲಿ ಅತ್ಯಂತ ಸಮರ್ಥನಾದ ಶಿಲ್ಪಿಯನ್ನು ನೋಡಿ ಈ ಕೆಲಸ ಒಪ್ಪಿಸಬೇಕು. ಎಲ್ಲಕ್ಕಿಂತ ಮುಖ್ಯವಾಗಿ, ಆ ವಿಗ್ರಹ ಪ್ರತಿಷ್ಠೆ ಗುರುಗಳ ಬರಲಿರುವ ಜನ್ಮದಿನೋತ್ಸವಕ್ಕೆ ಸಿದ್ಧವಾಗುವಂತೆ ನೋಡಬೇಕು. ಆಗ ಜನ್ಮದಿನೋತ್ಸವದೊಂದಿಗೆ ಪ್ರತಿಷ್ಠೋತ್ಸವವೂ ಸೇರಿಕೊಳ್ಳುತ್ತದೆ" ಎಂದು ಅಪ್ಪಣೆ ಮಾಡಿದನು.

ಮಾರ್ತಾಂಡ ಮಂತ್ರಿ ಆಸ್ಥಾನದ ಚಿತ್ರಕಾರನ ಮೂಲಕವಾಗಿ ರುದ್ರಾಕ್ಷನ ರೂಪ ಚಿತ್ರವನ್ನು ತಯಾರು ಮಾಡಿಸಿದನು. ಆಮೇಲೆ ಆ ಚಿತ್ರವನ್ನು ಅವಂತಿ ನಗರದಲ್ಲಿದ್ದ ಮಲ್ಲಣಾಚಾರಿ ಎಂಬ ಸುಪ್ರಸಿದ್ಧನಾದ ಶಿಲ್ಪಿಗೆ ಕಳುಹಿಸಿ, ರಾಜಾಜ್ಞೆಯೊಂದಿಗೆ ಒಂದು ಪತ್ರವನ್ನು ಕೂಡಾ ಬರೆದು ಕೊಡಿಸಿದನು.

ಮಾರ್ತಾಂಡನು ಆ ಪತ್ರದಲ್ಲಿ, "ಮಲ್ಲಣ ಶಿಲ್ಪಿಗಳೇ, ಈ ರೂಪ ಚಿತ್ರವು ಚತುರಂಗಪುರದ ಮಹಾ ರಾಜಾ ಚಂದ್ರಹಾಸರ ಗುರುಗಳಾದ ರುದ್ರಾಕ್ಷರದು. ಸಾಧ್ಯವಾದಷ್ಟು ಬೇಗದಲ್ಲಿ ಇವರ ವಿಗ್ರಹವನ್ನು ತಯಾರಿಸಿ, ತೆಗೆದುಕೊಂಡು ಬನ್ನಿರಿ. ಶಿಲ್ಪವನ್ನು ತಯಾರಿಸುವಾಗ ಒಂದು ಮುಖ್ಯ ವಿಷಯ ನೆನಪಿಟ್ಟುಕೊಳ್ಳಿರಿ. ರಾಜ ಗುರುಗಳು ಮಹಾ ವಿದ್ವಾಂಸರಾಗಿದ್ದರೂ ಸರ್ವಸಂಗ ಪರಿತ್ಯಾಗಿಗಳು" ಎಂದು ತಿಳಿಯಪಡಿಸಿದ್ದನು.

ರುದ್ರಾಕ್ಷನ ಜನ್ಮದಿನೋತ್ಸವಕ್ಕೆ ಕೆಲವು ದಿನಗಳ ಮೊದಲೇ ಮಲ್ಲಣಾಚಾರಿ ವಿಗ್ರಹವನ್ನು ತಯಾರಿಸಿ ಚತುರಂಗಪುರಕ್ಕೆ ತೆಗೆದುಕೊಂಡು ಬಂದು ಮಂತ್ರಿಗೆ ಒಪ್ಪಿಸಿದನು.

ಮಂತ್ರಿ ಮಾರ್ತಾಂಡನು ಆ ಸಂಗತಿಯನ್ನು ರಾಜನಿಗೆ ತಿಳಿಯಪಡಿಸಿದ ಕೂಡಲೇ ರಾಜನು ಬಹಳ ಸಂತೋಷಪಟ್ಟು, ರಾಜಗುರುಗಳ ಜನ್ಮದಿನೋತ್ಸವದ ದಿನ ತಾನು ಸ್ವತಃ ಬಂದು ವಿಗ್ರಹ ಪ್ರತಿಷ್ಠೆ ಮಾಡುವೆನೆಂದೂ, ಅದುವರೆಗೆ ಆ ವಿಗ್ರಹವನ್ನು ರಹಸ್ಯವಾಗಿ ಮುಚ್ಚಿಡುವಂತೆಯೂ ಹೇಳಿದನು.

ಆ ದಿನವೂ ಬಂದಿತು. ಮಂಗಳ ವಾದ್ಯಗಳ ನಡುವೆ ವಿಗ್ರಹಕ್ಕೆ ಮುಚ್ಚಿದ್ದ ಆಚ್ಛಾದನೆಯನ್ನು ತೊಲಗಿಸಿದ ಕೂಡಲೇ, ರುದ್ರಾಕ್ಷನು ಆ ವಿಗ್ರಹದ ಕಡೆಗೆ ತದೇಕ ದೃಷ್ಟಿಯಿಂದ ನೋಡಿ, ಉಕ್ಕಿ ಬರುವ ಕೋಪಾವೇಶದಿಂದ, "ಇದು ನನ್ನ ಶಿಲಾವಿಗ್ರಹವೋ? ಎಂತಹ ದೀಪ ಹೊತ್ತಿಸಿ ನೋಡಿದರೂ ಇದರಲ್ಲಿ ನನ್ನ ಹೋಲಿಕೆ ಎಲ್ಲಿಯೂ ಇಲ್ಲ! ಎಂತಹ ವಿರೂಪ ಶಿಲ್ಪವಿದು! ಮುಖದಲ್ಲಿ ಮಾತ್ರ ಹೋಲಿಕೆ ಇದ್ದರಾಯಿತೇನು?" ಎಂದನು.

ಆ ಮಾತು ಕೇಳಿ ರಾಜನ ಮುಖವು ಸಣ್ಣದಾಯಿತು. ಅವನು ಮಂತ್ರಿ ಮಾರ್ತಾಂಡನ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದನು.

ಆಗ ಮಾರ್ತಾಂಡನು ವಿನಯದಿಂದ, "ಪ್ರಭೂ, ಈ ವಿಗ್ರಹವನ್ನು ತಯಾರುಮಾಡಿದ್ದು ಪ್ರಖ್ಯಾತ

ಶಿಲ್ಪಿಯಾದ ಮಲ್ಲಣಾಚಾರಿ. ಅಪರೂಪವಾದ ಎಷ್ಟೋ ಕಲಾ ಖಂಡಗಳನ್ನು ಕೆತ್ತಿ ಒಳ್ಳೆಯ ಖ್ಯಾತಿ ಪಡೆದಿದ್ದಾನೆ. ಈ ಶಿಲ್ಪ ಕಾರ್ಯದಲ್ಲಿಯೂ ತನಗೆ ಯಾರೂ ಸಾಟಿಬಾರರೆಂಬ ಅಹಂಕಾರದಲ್ಲಿ ಕೆಲಸ ಮಾಡಿದ್ದಾನೆಂದು ಕಾಣುತ್ತದೆ. ಈ ವಿಗ್ರಹದಲ್ಲಿರುವ ಲೋಪಗಳನ್ನು ಅವನಿಗೆ ತಿಳಿಯಪಡಿಸಲೇಬೇಕು" ಎಂದು ಹೇಳಿ ಮಲ್ಲಣಾಚಾರಿಯನ್ನು ಕರೆಯಿಸಿದನು.

ಮಲ್ಲಣಾಚಾರಿ ರಾಜನ ಮುಂದೆ ಬಂದು ನಿಂತನು. ರಾಜನು ಅವನನ್ನು ನೋಡಿ, "ನೀನು ಪ್ರಸಿದ್ಧಿ ಪಡೆದ ಶಿಲ್ಪಿಯಾಗಿರಬಹುದು. ಆದರೆ ನಮ್ಮ ಗುರುಗಳ ವಿಗ್ರಹವನ್ನು ತಯಾರಿಸುವುದರಲ್ಲಿ ಪೂರ್ತಿ ವಿಫಲನಾಗಿರುವಿ. ತನ್ನ ಸ್ವರೂಪಕ್ಕೂ ಈ ವಿಗ್ರಹಕ್ಕೂ ಹೋಲಿಕೆಯೇ ಇಲ್ಲವೆಂದು ಅವರೇ ಹೇಳುತ್ತಾರೆ. ಇದಕ್ಕೆ ಈಗ ನೀನೇನು ಹೇಳುವಿ?" ಎಂದು ಕೇಳಿದನು.

ಮಲ್ಲಣಾಚಾರಿ ಆಶ್ಚರ್ಯಪಡುವಂತೆ, ಒಂದು ಸಾರಿ ಮಂತ್ರಿಯನ್ನು ನೋಡಿ ರಾಜನೊಂದಿಗೆ, "ಮಹಾರಾಜಾ, ರಾಜ ಗುರುಗಳ ವಿಗ್ರಹವನ್ನು, ನನಗೆ ಮಂತ್ರಿಯವರು ಕಳುಹಿಸಿದ ಚಿತ್ರವನ್ನು ನೋಡಿದ ಮೇಲೆ, ಶಿಲ್ಪ ಕಾರ್ಯಕ್ಕೆ ಪ್ರಾರಂಭ ಮಾಡಿದೆನು. ಆದರೆ ಮಂತ್ರಿಯವರು ನನಗೆ ಕಳುಹಿಸಿದ ಪತ್ರದಲ್ಲಿ ರಾಜಗುರುಗಳು ಮಹಾ ವಿದ್ವಾಂಸರಾದರೂ ಸರ್ವಸಂಗ ಪರಿತ್ಯಾಗಿಗಳೆಂದು, ವಿಗ್ರಹವನ್ನು ತಯಾರಿಸುವಾಗ ಅದನ್ನು ಮರೆಯಬಾರದೆಂದು ಆದೇಶ ಮಾಡಿದ್ದಾರೆ. ಆದ್ದರಿಂದ ಹೀಗಾಯಿತು" ಎಂದು ಹೇಳಿದನು.

"ಹೌದು ಪ್ರಭೂ! ಆ ಮಾತು ನಿಜವೇ" ಎಂದನು ಮಾರ್ತಾಂಡ ಮಂತ್ರಿ.

ಅನಂತರ ಮಲ್ಲಣಾಚಾರಿ ರಾಜಗುರುಗಳ ಕಡೆಗೆ ಪರೀಕ್ಷಿಸಿ ನೋಡಿ, "ಸರ್ವಸಂಗ ಪರಿತ್ಯಾಗಿಗಳಾದ ಮಹಾ ಪುರುಷರ ರೂಪ ರೇಖೆಗಳು ಹೇಗಿರುತ್ತವೆಂದು ನನಗೆ ತಿಳಿಯದೆಂದೇನಿಲ್ಲ. ಆದುದರಿಂದಲೇ ವಿಗ್ರಹದ ಮುಖದಲ್ಲಿ ಪ್ರಶಾಂತತೆಯನ್ನು, ವಸ್ತ್ರಾಲಂಕರಣದಲ್ಲಿ ನಿರಾಡಂಬರತೆಯನ್ನು, ಕೊರಳಲ್ಲಿ



ರುದ್ರಾಕ್ಷ ಮಾಲೆಯನ್ನು ಕೈಗಳಲ್ಲಿ ದಂಡ ಕಮಂಡಲುಗಳನ್ನು ಇರಿಸುವುದು ಅಗತ್ಯವೆಂದು ಭಾವಿಸಿ ಹಾಗೆ ಶಿಲ್ಪವನ್ನು ತಯಾರಿಸಿದೆನು. ಇದಕ್ಕೆ ಮನ್ನಿಸಬೇಕೆಂದು ಪ್ರಾರ್ಥಿಸುತ್ತೇನೆ. ಬಹು ಬೇಗದಲ್ಲಿ ಮಂತ್ರಿಯವರು ಕಳುಹಿಸಿದ ಚಿತ್ರದಲ್ಲಿರುವ ಹಾಗೆ ಇನ್ನೊಂದು ವಿಗ್ರಹವನ್ನು ತಯಾರು ಮಾಡಿ ತಂದುಕೊಡುತ್ತೇನೆ " ಎಂದನು.

" ಹಾಗೆಯೇ ಮಾಡು. ಆದರೆ ಕೆಲಸ ಮಾತ್ರ ಬಹಳ ಬೇಗದಲ್ಲಿ ಮುಗಿಸಿ ತಂದುಕೊಡಬೇಕು " ಎಂದನು ರಾಜ.

ಮಲ್ಲಣಾಚಾರಿ ರಾಜನಿಗೆ ನಮಸ್ಕಾರಮಾಡಿ ಅಲ್ಲಿಂದ ಹೊರಟನು.

ಆಗ ರುದ್ರಾಕ್ಷನು ಅವನನ್ನು ತಡೆದು ನಿಲ್ಲಿಸಿ ರಾಜನೊಂದಿಗೆ, " ಮಹಾರಾಜಾ, ಈ ವಿಗ್ರಹದಲ್ಲಿ ಯಾವ ಬಗೆಯ ಬದಲಾವಣೆಯನ್ನೂ ಮಾಡಬೇಕಾಗಿಲ್ಲ. ಅಷ್ಟೇ ಅಲ್ಲ. ಅದನ್ನು ಇಷ್ಟೊಂದು ವೈಭವ ರೀತಿಯಲ್ಲಿ ನಗರ ಮಧ್ಯದಲ್ಲಿ ಪ್ರತಿಷ್ಠಿಸಬೇಕಾದ ಅಗತ್ಯವೂ ಇಲ್ಲ " ಎಂದನು.

ಆ ಮಾತು ಕೇಳಿ ಎಲ್ಲರೂ ಆಶ್ಚರ್ಯಪಡುತ್ತಿರಲು, ರುದ್ರಾಕ್ಷನು, " ಚಂದ್ರಹಾಸ ರಾಜಾ, ಅಲೌಕಿಕ ವಿಷಯಗಳಲ್ಲಿ ನಾನು ಏನೋ ಸ್ವಲ್ಪ ಮಟ್ಟಿಗೆ ಜ್ಞಾನವನ್ನು ಆರ್ಜಿಸಿಕೊಂಡಿದ್ದೇನೆ. ಅಂತಹ ನಾನು ಲೌಕಿಕ ವಿಷಯದಲ್ಲಿ ಅಗತ್ಯಕ್ಕೆ ಮೀರಿದ ಧರಲ್ಲಿ ತಲೆ ಹಾಕುತ್ತಾ ಅನೇಕರಿಗೆ ನೋವನ್ನುಂಟುಮಾಡಿದ್ದೇನೆ. ಆದರಿಂದಾಗಿ ನನ್ನ ನಿಜ ರೂಪವು ಮರೆಯಾಗಿ ಹೋಯಿತು. ಈ ಸಂಗತಿಯನ್ನು ನಿಮ್ಮಲ್ಲಿ ಅನೇಕರು ತಿಳಿದಿರಬಹುದು. ನಿಜತಾನೇ ? " ಎಂದನು.

ಆ ಪ್ರಶ್ನೆಗೆ ಯಾರೂ ಉತ್ತರ ಕೊಡಲಿಲ್ಲ. ಆಗ ರುದ್ರಾಕ್ಷನು ಮಂದಹಾಸ ತೋರಿಸುತ್ತ, " ರಾಜಾ, ಮಂತ್ರಿ ಮಾರ್ತಾಂಡನು ಶಿಲ್ಪಿ ಮಲ್ಲಣಾಚಾರಿಯ ಮೂಲಕವಾಗಿ ಮರೆಯಾಗಿ ಹೋಗಿದ್ದ ನನ್ನ ನಿಜ ರೂಪವನ್ನು ಹೊರಗೆ ತೆಗೆಯಿಸಿ ನನಗೆ ಮಹೋಪಕಾರವನ್ನೇ ಮಾಡಿದ್ದಾನೆ. ಆತನಂತಹ, ಸಮರ್ಥರಾದ ಮಂತ್ರಿಗಳೂ ಇತರ ಉದ್ಯೋಗಸ್ಥರೂ ನಿನಗೆ ಸಹಾಯಕರಾಗಿರುವಾಗ, ನನ್ನ ಅಗತ್ಯ ಇನ್ನು ಮೇಲೆ ರಾಜ್ಯಕ್ಕೆ ಬೇಕಾಗಲಾರದು. ಬಯಲಿಗೆ ಬಂದ ನನ್ನ ನಿಜರೂಪವು ಮತ್ತೆ ಮರೆಯಾಗಿ ಹಾಳಾಗಿ ಹೋಗದಂತೆ, ನಾನಿನ್ನು ಮೇಲೆ ಭಗವದಾರಾಧನೆಗಿಂತ ಹೆಚ್ಚಾದುದೇನನ್ನೂ ಮಾಡಲಾರೆನು. ನನ್ನನ್ನು ತೀರ್ಥ ಯಾತ್ರೆಗೆ ಹೋಗಲು ಬಿಡು " ಎಂದನು.

ಮರುದಿನ ರುದ್ರಾಕ್ಷನು ತನ್ನ ಆಡಂಬರದ ಅಲಂಕಾರಗಳನ್ನೆಲ್ಲ ತೊರೆದು ಶಿಲ್ಪಿ ಮಾಡಿದ ವಿಗ್ರಹದ ರೂಪದಲ್ಲಿ ತೀರ್ಥಾಟನೆಗೆ ಹೊರಟನು.





# ಲೋಭಿ ವರ್ತಕ

ಒಂದಾನೊಂದು ಗ್ರಾಮದ ಸಮೀಪದಲ್ಲಿ ಫಲ ವೃಕ್ಷಗಳಿಂದ ತುಂಬಿದ ಒಂದು ತೋಟವಿದ್ದಿತು. ಆ ತೋಟದಲ್ಲಿ ಒಬ್ಬ ಯೋಗಿ ಪರ್ಣಶಾಲೆಯನ್ನು ನಿರ್ಮಿಸಿಕೊಂಡು ವಾಸಮಾಡಿಕೊಂಡಿದ್ದನು. ಅವನಿಗೆ ಅನೇಕ ಮಂದಿ ಶಿಷ್ಯರಿದ್ದರೂ ಅನೇಕರು ಆಧ್ಯಾತ್ಮಿಕ ವಿಷಯಗಳಿಗಿಂತ ಪ್ರಾಪಂಚಿಕ ವಿಷಯಗಳಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವರಾಗಿದ್ದರು, ಆದರೂ ಯೋಗಿ ಅವರೆಲ್ಲರನ್ನೂ ಆದರಿಸಿ ಪ್ರಾಮಾಣಿಕವಾಗಿ ಸುಖ ಶಾಂತಿಗಳಿಂದ ಜೀವಿಸಲು ಅಗತ್ಯವಾದ ಬೋಧನೆಗಳನ್ನು ಕೊಡುತ್ತಿದ್ದನು. ಅವನ ಬೋಧನೆಗಳು ಎಲ್ಲರಿಗೂ ಹಿಡಿಸುವಂತೆ ಆಕರ್ಷಣೀಯವಾಗಿರುತ್ತಿತ್ತು. ಎಲ್ಲರಿಗೂ ಅರ್ಥವಾಗುವಂತೆ ಸ್ಪಷ್ಟವಾಗಿರುತ್ತಿತ್ತು.

ಅವನ ಶಿಷ್ಯರಲ್ಲಿ ಒಬ್ಬ ವರ್ತಕ ವೃತ್ತಿಯವನೂ ಇದ್ದನು. ಅವನು ಕರಡು ಗಟ್ಟಿದಂತಹ ಲೋಭ ಗುಣದವನು. ತುಂಬಾ ದುರಾಶೆಯುಳ್ಳವನು. ವ್ಯಾಪಾರದಲ್ಲಿ ಅವನು ಲಕ್ಷಗಟ್ಲೆ ಧನ ಸಂಪಾದನೆ ಮಾಡಿದರೂ, ಒಂದು ಪೈಸೆ ಕೈಜಾರಿ ಹೋಗುವಂತಾದರೆ, ಆ ನಷ್ಟ ತುಂಬಿಸಿಕೊಳ್ಳಬೇಕೆಂಬ ಹಟದಲ್ಲಿ ಒಂದು ಹೊತ್ತಿನ ಊಟ ಬಿಟ್ಟುಬಿಡುವಂತಹವನು. ಮಿತ್ರರನ್ನು ಊಟಕ್ಕೆ ಕರೆಯುವುದಾಗಲೀ, ಯಾವ ಧರ್ಮ ಕಾರ್ಯಕ್ಕಾದರೂ ಚಂದಾ ಕೊಡುವುದಾಗಲೀ ಅವನೆಂದೂ ಮಾಡಿದವನಲ್ಲ.

ಯಾವಾಗಲೂ ಏನೋ ದಿಗಿಲು ಬಡಿದವನ ಹಾಗೆ ಅಥವಾ ಎಂಥದೋ ದೀರ್ಘಾಲೋಚನೆ ಮಾಡುವವನ ಹಾಗೆ ಕಾಣುವ ವರ್ತಕನನ್ನು ನೋಡಿ ಯೋಗಿ ಆಗಾಗ, "ನೀನು ಏನೋ ವಿಚಾರದಲ್ಲಿರುವ ಹಾಗೆ ಕಾಣುತ್ತಧೆ. ಮನುಷ್ಯನ ಮುಖಕ್ಕ ನಗುವೇ ಅಲಂಕಾರ. ನಗುವುದನ್ನೇ ನೋಡಲಿಲ್ಲ. ಕಾರಣ ಹೇಳುವಿಯಾ ?" ಎಂದು ಕೇಳುತ್ತಿದ್ದನು.

ಆ ಪ್ರಶ್ನೆಗೆ ವರ್ತಕನು ಮತ್ತಿಷ್ಟು ಬಾಡಿದ ಮುಖದಲ್ಲಿ, "ಸ್ವಾಮಿ, ಸಂತೋಷವಾಗಿ ನಗಲಿಕ್ಕೆ ಏನಿದೆ ಮಹಾ ? ಲೋಕವೆಲ್ಲಾ ದುಷ್ಟರ ಮಯವಾಗಿ ತಾನೇ ಇದೆ ? ನಾನು ಎಷ್ಟು ಶ್ರಮಪಟ್ಟರೂ ಆದಕ್ಕೆ ತಕ್ಕ ಪ್ರತಿಫಲ ಮಾತ್ರ ಸೊನ್ನೆಯೇ !" ಎನ್ನುತ್ತಿದ್ದನು.

ಯೋಗಿ ಅನೇಕ ಬಾರಿ ಅವನಿಗೆ, "ನೀನು ಇಲ್ಲದ ಸಲ್ಲದ ಭಯಗಳಿಂದ ಚಿಂತಿಸಿಕೊಂಡಿರುವಿ. ಆದರಿಂದ ಏನೂ ಆಗದು. ಸಂತೋಷವಾಗಿರು" ಎಂದು

ಮನೋಜದಾಸ್



ಹೇಳಿ ನೋಡಿದನು. "ಲೋಕದಲ್ಲಿ ಎಷ್ಟೋ ಬಡ ಜನರಿದ್ದಾರೆ ಅವರು ಇರುವುದರಲ್ಲೇ ತೃಪ್ತಿಪಟ್ಟು ಕೊಂಡು ಸಂತೋಷದಿಂದ ಕಾಲ ಕಳೆಯುತ್ತಿದ್ದಾರೆ. ನೀನು ಕೂಡಾ ನಿನ್ನ ಧೋರಣೆಯನ್ನು ಬದಲಾಯಿಸಿ ಕೊಂಡರೆ ಸುಖವಾಗಿ ಕಾಲ ಕಳೆಯಬಹುದು" ಎಂದೆಲ್ಲಾ ಬೋಧಿಸಿದನು ಯೋಗಿ: ಆದರೂ ವರ್ತಕನಲ್ಲಿ ಯಾವ ಸಣ್ಣ ಬದಲಾವಣೆಯೂ ಕಂಡು ಬರಲಿಲ್ಲ.

ಹೀಗೆ ಸ್ವಲ್ಪಕಾಲ ಕಳೆದ ಮೇಲೆ ಯೋಗಿಗೆ ಏನೋ ಕಾಯಿಲೆ ಬಂದಿತು. ಕಾಯಿಲೆ ಜೋರಾಗುತ್ತಾ ಹೋಯಿತು. ಅವನು ಎಲ್ಲಾ ಶಿಷ್ಯರನ್ನೂ ಕರೆದು, "ಇನ್ನು ಬೇಗದಲ್ಲೇ ನಾನು ದೇಹ ಬಿಡಬೇಕೆಂದಿದ್ದೇನೆ. ನೀವೆಲ್ಲರೂ ಸುಖವಾಗಿರಬೇಕೆಂಬುದು ನನ್ನ ಆಶೀರ್ವಾದ. ದೇವರ ಮೇಲೆ ಅಚಂಚಲವಾದ ವಿಶ್ವಾಸವಿಟ್ಟು ಬಾಳಿರಿ. ಅದು ನಿಮಗೆ ಜೀವನದಲ್ಲಿ ಸುಖಶಾಂತಿಗಳನ್ನು ಉಂಟುಮಾಡುತ್ತದೆ. ಆದರೆ ಕಡೇಬಾರಿ ನಿಮ್ಮ ಸಮಸ್ಯೆಗಳನ್ನು ಕುರಿತು ನನ್ನ ಆಲೋಚನೆ ನಿಮಗೆ ಅಗತ್ಯವೆನಿಸಿದರೆ, ಒಬ್ಬೊಬ್ಬರೇ ನನ್ನ ಹತ್ತಿರ ಬಂದು ಹೇಳಬಹುದು" ಎಂದು ಹೇಳಿದನು.

ಯೋಗಿಯ ಅನಾರೋಗ್ಯದ ಪರಿಸ್ಥಿತಿಯನ್ನು ನೋಡಿ ಶಿಷ್ಯರಿಗೆಲ್ಲಾ ಆಂದೋಳನೆಯುಂಟಾಯಿತು. ಅವರ ದುಃಖವು ಕಣ್ಣುಗಳ ಮೂಲಕ ಹರಿಯ ತೊಡಗಿತು.

ಸ್ವಲ್ಪ ಹೊತ್ತಿನ ಮೇಲೆ ಒಬ್ಬೊಬ್ಬರೇ ಯೋಗಿಯ ಹತ್ತಿರ ಹೋದರು. ತಮ್ಮನ್ನು ಆಶೀರ್ವದಿಸ ಬೇಕೆಂದಷ್ಟೇ ಕೇಳಿಕೊಂಡರು.

ಕಟ್ಟಕಡೆಗೆ ಯೋಗಿಯ ಹತ್ತಿರ ಹೋದ ಲೋಭಿ ವರ್ತಕನು, "ನಾನು ಕೇಳುವುದು ಏನಾದರೂ ಸರಿಯೆ, ಕೊಡುವೆನೆಂದು ಮೊದಲು ವಾಗ್ದಾನ ಮಾಡಿರಿ ಸ್ವಾಮೀ" ಎಂದನು.

ಆಗ ಯೋಗಿ ಇನ್ನು ಪ್ರಶಾಂತವಾಗಿ ಕಣ್ಣು ಮುಚ್ಚಿ ನಿದ್ರಿಸಬೇಕೆಂಬ ಆತುರದಲ್ಲಿದ್ದನು. ಆ ಕಾರಣದಿಂದ ಅವನು ವರ್ತಕನನ್ನು ಬೇಗನೇ ಕಳುಹಿಸಿಬಿಡಬೇಕೆಂದುಕೊಂಡು, ಅವನು ಹೇಳಿದುದಕ್ಕೆ ಸರಿ ಎಂಬಂತೆ ತಲೆಯಾಡಿಸಿದನು.

ಲೋಭಿ ವರ್ತಕನು, "ಸ್ವಾಮೀ, ನಿಮ್ಮ ಹಳೆಯ ಶಿಷ್ಯರಲ್ಲಿ ಒಬ್ಬನು ನಿಮಗೆ ಕೆಲವು ಅದ್ಭುತ ಶಕ್ತಿಗಳಿರುವುದೆಂದು ಹೇಳಿದ್ದಾನೆ. ನೀವು ಕಬ್ಬಿಣ ವನ್ನು ಚಿನ್ನವಾಗಿ ಮಾಡುವಿರಂತೆ. ಆ ಶಕ್ತಿಯನ್ನು ನನಗೆ ಪ್ರಸಾದಿಸಬೇಕು" ಎಂದನು.

ಅವನ ಕೋರಿಕೆಯನ್ನು ಕೇಳಿ ಮರಣಾವಸ್ಥೆಯಲ್ಲಿದ್ದ ಯೋಗಿ ನಿಧಾನವಾಗಿ ಕುಂಠಿತ ಸ್ವರದಿಂದ, "ಅಯ್ಯಯ್ಯೋ! ಅಂತಹ ಶಕ್ತಿ ನನಗಿದೆ ಅಂದು ಕೊಂಡಿರುವೆಯಾ? ಒಂದು ಮಾತು ನೆನಪಿಟ್ಟುಕೋ. ಒಂದು ವೇಳೆ ಅಂತಹ ಶಕ್ತಿಯನ್ನು ನೀನು ಸಂಪಾದಿಸಿ ಬಿಟ್ಟೆಯಾದರೆ, ಇನ್ನಷ್ಟು ಮನೋಕ್ಷೋಭೆಗೆ ಗುರಿ

ಯಾಗುವಿ. ಆದುದರಿಂದ ಅದನ್ನೊಂದು ಬಿಟ್ಟು ನಿನಗೆ ನಿಜಕ್ಕೂ ಮೇಲಾಗುವುದೇನಾದರೂ ಬೇಕಾಗಿದ್ದರೆ ನನ್ನನ್ನು ಕೇಳು !" ಎಂದನು.

"ಹಾಗಲ್ಲ ಸ್ವಾಮೀ ! ಒಂದು ಸಾರಿ ಆ ರಹಸ್ಯ ತಿಳಿದುಕೊಂಡುಬಿಟ್ಟರೆ ಲೋಕದಲ್ಲಿ ನನ್ನಷ್ಟು ಸುಖಿಯಾಗಿರುವವನು ಮತ್ತೊಬ್ಬನಿರಲಾರನು. ಎಷ್ಟು ಬಂಗಾರವಿರುವುದೋ, ಅಷ್ಟೂ ಸುಖವೇ !" ಎಂದು ಧೈರ್ಯದಿಂದ ಹೇಳಿದನು ಲೋಭಿ ವರ್ತಕ.

ಇನ್ನು ಇವನಿಗೆ ನೀತಿಬೋಧೆ ಮಾಡಿದರೆ ಪ್ರಯೋಜನವಿಲ್ಲವೆಂದು ಯೋಗಿಗೆ ಗೊತ್ತಾಯಿತು. ತತ್‌ಕ್ಷಣವೇ ಅವನನ್ನು ಅಲ್ಲಿಂದ ಹೊರಡಿಸಲು ಒಂದು ಮಂತ್ರವನ್ನು ಹೇಳಿ, "ಎಂತಹ ಕಬ್ಬಿಣವನ್ನಾದರೂ ಸರಿಯೆ, ಮುಟ್ಟಿ ಈ ಮಂತ್ರವನ್ನು ಮೂರುಸಾರಿ ಜಪಿಸು. ಕೂಡಲೇ ಅದು ಬಂಗಾರದ ಗಟ್ಟಿಯಾಗಿ ಹೋಗುತ್ತದೆ !" ಎಂದನು.

ಅನಂತರ ಸ್ವಲ್ಪಹೊತ್ತಿನ ಮೇಲೆ ಯೋಗಿ ಸತ್ತು ಹೋದನು. ಅವನ ಶಿಷ್ಯರೆಲ್ಲರೂ ದೊಡ್ಡ ಶೋಕದಲ್ಲಿ ಇರುವಾಗ ಲೋಭಿ ವರ್ತಕನು ಒಬ್ಬನೇ ಸಂತೋಷದಲ್ಲಿ ಇದ್ದನು.

ಅದನ್ನು ನೋಡಿ ಇತರ ಶಿಷ್ಯರು, "ಮಹಾಯೋಗಿಗಳು ಇವನಿಗೆ ಏನೋ ದೈವ ಸಾನ್ನಿಧ್ಯವು ಸುಲಭವಾಗಿ ಸಾಧ್ಯವಾಗುವಂತಹ ಯಾವುದೋ ಮಂತ್ರವನ್ನು ಉಪದೇಶ ಮಾಡಿರಬೇಕು. ನಮಗೆ ಆ ಅದೃಷ್ಟವಿಲ್ಲದೆ ಹೋಯಿತು. ಯೋಗೀಂದ್ರರಿಗೆ ಅವನ ಮೇಲೆ ಅಷ್ಟು ಆದರಣೆ ಬರಲು ಏನೋ ಕಾರಣವಿದ್ದೀತು" ಎಂದುಕೊಂಡರು.

ಒಂದು ವಾರ ದಿನಗಳು ಕಳೆದ ಮೇಲೆ ಲೋಭಿ ವರ್ತಕನು ಉಕ್ಕನ್ನೂ ಕಬ್ಬಿಣವನ್ನೂ ಕೊಂಡುಕೊಂಡು ಬರಲು ಪೇಟೆಗೆ ಹೋದನು. ಅಲ್ಲಿ ವ್ಯಾಪಾರಿ ಅದಕ್ಕೆ ಹೇಳಿದ ಬೆಲೆ ಬಹಳ ಹೆಚ್ಚೆಂದು ತೋರಿತು. ಬೆಲೆ ಇಳಿಯುವವರೆಗೂ ಕಾಯುವುದೇ ಬುದ್ಧಿವಂತಿಕೆ ಎಂದು ಅವನಿಗೆ ತೋರಿತು.

ಮತ್ತೊಂದು ವಾರ ಕಳೆದ ಮೇಲೆ ಅವನು ಪೇಟೆಗೆ ಹೋಗಿ ಕಬ್ಬಿಣದ ಬೆಲೆ ವಿಚಾರಿಸತೊಡಗಿ



ದನು. ಬೆಲೆಯಲ್ಲಿ ಯಾವ ಬದಲಾವಣೆಯೂ ಇಲ್ಲದುದನ್ನು ನೋಡಿ ಲೋಭಿ ವರ್ತಕನು, "ಈ ತುಕ್ಕು ಕಬ್ಬಿಣವು ಬಂಗಾರವಾಗಿ ಮಾರ್ಪಡುವುದ ರಿಂದ, ಸ್ವಲ್ಪ ಹೆಚ್ಚು ಬೆಲೆ ಕೊಟ್ಟು ಕೊಂಡು ಕೊಂಡರೂ ನಷ್ಟವೇನೂ ಇಲ್ಲ. ಆದರೂ ಆ ವರ್ತಕನಿಗೆ ಹೆಚ್ಚು ಲಾಭವನ್ನು ಏಕೆ ಬರಿಸಬೇಕು? ಇನ್ನೂ ಸ್ವಲ್ಪಕಾಲ ಕಾದು ನೋಡುವುದೇ ಒಳ್ಳೇದು" ಎಂದುಕೊಂಡನು.

ಈ ವಿಧವಾಗಿ ಮುಂದೂಡುತ್ತ, ಎರಡು ವರ್ಷ ಗಳು ಕಳೆದು ಹೋದುವು. ಆಗ ಯಾವುದೋ ಕಾರಣದಿಂದ ತುಕ್ಕು ಕಬ್ಬಿಣದ ಬೆಲೆ ಥಕ್ಕನೆ ಇಳಿದು ಹೋಯಿತು.

ಲೋಭಿ ವರ್ತಕನು ಪೇಟೆಗೆ ಹೋಗಿ ಬಹಳ ಅಗ್ಗಕ್ಕೆ ಸಿಕ್ಕುವ ಹಳೆಯ ತುಕ್ಕು ಹಿಡಿದ ಕಬ್ಬಿಣ ವನ್ನು ಕೆಲವು ಬಂಡಿಗಳಷ್ಟು ಕೊಂಡು ಕೊಂಡು ಮನೆಗೆ ತಂದು ಹಾಕಿದನು. ಅದೆಲ್ಲವೂ ಬಂಗಾರ ಗಳಾಗಿ ಹೋಗುವುದರಿಂದ, ಅದನ್ನು ಕಾಪಾಡಲಿ ಕ್ಕಾಗಿ ಭದ್ರತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮನೆಯ ದುರಸ್ತಿಗೆ ತೊಡಗಿದನು. ಅದಕ್ಕಾಗಿ ಅನೇಕ ಗಾರೆ ಕೆಲಸದವರನ್ನೂ, ಮೇಸ್ತ್ರಿಗಳನ್ನೂ ಬಡಗಿ ಗಳನ್ನೂ ನಿಯಮಿಸಿದನು. ಸುಣ್ಣ, ಮರಳು, ಜಲ್ಲಿ ಮುಂತಾದುವುಗಳಿಗಾಗಿ, ಕೂಲಿಗಳಿಗಾಗಿ ಅಪಾರ ಧನವನ್ನು ಧಾರಾಳವಾಗಿ ವೆಚ್ಚಮಾಡಿದನು. ಆದರೇ ನಾಯಿತು? ಬಂಡಿ ಬಂಡಿ ಕಬ್ಬಿಣವೆಲ್ಲಾ ಬಂಗಾರ ಗಳಾದರೆ ಈ ಖರ್ಚುಗಳೆಲ್ಲ ಯಾವ ಲೆಕ್ಕ?

ಮನೆ ಭದ್ರವೆಂಬ ನಂಬುಗೆಯಾದ ಮೇಲೆ ಲೋಭಿ ವರ್ತಕನು ಬಹು ದೊಡ್ಡ ಕಬ್ಬಿಣದ ರಾಶಿಗಳ ಮಧ್ಯದಲ್ಲಿ ಕುಳಿತುಕೊಂಡು ಮಂತ್ರೋ ಚ್ಚಾರ ಮಾಡಲು ನೋಡಿದನು. ಆದರೆ ಯೋಗಿ ಉಪದೇಶಿಸಿದ ಮಂತ್ರವು ನೆನಪಿಗೆ ಬರಲಿಲ್ಲ. ಅವನು ಮರೆಯದಂತೆ ಯಾವುದರಲ್ಲೋ ಬರೆದಿಟ್ಟಿದ್ದನು. ಅದೆಲ್ಲಿದೆ ಎಂಬುದೂ ನೆನಪಿಗೆ ಬರಲಿಲ್ಲ. ಅವನು ನಿರಾಶೆಯಿಂದ ತಲೆ ತುರಿಸಿ ಜುಟ್ಟು ಎಳೆದು ಕಿತ್ತು ಕಬ್ಬಿಣದ ಮೇಲೂ, ಗೋಡೆಗೂ ತಲೆ ಬಡಿದು ಕೊಂಡು ಮಂತ್ರವನ್ನು ನೆನಪಿಗೆ ತರಲು ಎಷ್ಟೋ ಪ್ರಯತ್ನ ಮಾಡಿದನು. ಪ್ರಯೋಜನವಾಗಲಿಲ್ಲ.

ಅವನು ಮಾಡಿದ ತಪ್ಪು ಏನೆಂದರೆ, ಎರಡು ವರ್ಷಗಳವರೆಗೆ ಕಬ್ಬಿಣದ ಬೆಲೆಯ ಏರಿಳಿತಗಳನ್ನೇ ತೀವ್ರವಾಗಿ ಯೋಚಿಸಿಕೊಂಡಿದ್ದುದರಿಂದಲೇ, ಮಂತ್ರವು ಪೂರ್ತಿ ಮರೆಯಲು ಕಾರಣವಾಯಿತು.

ಅನಂತರ ಕೆಲವು ದಿನಗಳವರೆಗೆ ಅವನಿಗೆ ಮತಿ ಸ್ಥಿಮಿತ ತಪ್ಪಿತು. ಬದುಕಿರುವವರೆಗೂ ತುಕ್ಕು ಕಬ್ಬಿಣವನ್ನು ಕಾಯುತ್ತಾ, "ಬಂಗಾರ! ಬಂಗಾರ!" ಎಂದು ಹರಟುತ್ತಾ ಕಾಲ ಕಳೆದನು.






## ೧೬

[ ಚಂದ್ರವರ್ಮನು ಕಂಚುಕೋಟೆಗೆ ಹೋಗಲು ಚಂದ್ರಪುರದ ರಾಜನಾದ ಶಿವಸಿಂಹನು ಸಹಾಯ ಮಾಡಿದನು. ಅದರಂತೆ ಚಂದ್ರವರ್ಮನು ನಾಲ್ವರು ರಾಜೋದ್ಯೋಗಿಗಳನ್ನೂ, ಕೆಲವು ಸೈನಿಕರನ್ನೂ ಕರೆದುಕೊಂಡು ಪಶ್ಚಿಮ ದಿಕ್ಕಿಗೆ ಪ್ರಯಾಣ ಮಾಡಿದನು. ದಾರಿಯಲ್ಲಿ ಒಂದು ಶಿಥಿಲ ನಗರವು ಕಾಣಿಸಿತು. ಅಲ್ಲಿ ನೋಡಲು ಸಿಕ್ಕಿದ ಒಂದು ಶಾಸನದ ಮೂಲಕ ಅದು ಕರವೀರಪುರವೆಂದು ಚಂದ್ರವರ್ಮನಿಗೆ ತಿಳಿಯಿತು. —ಮುಂದೆ ಓದಿರಿ]

ಕರವೀರಪುರದ ದೊಡ್ಡ ದೊಡ್ಡ ಶಿಥಿಲ ಪ್ರದೇಶಗಳನ್ನು ದಾಟಿ ಪಶ್ಚಿಮ ದಿಕ್ಕನ್ನು ಹಿಡಿದು ಸ್ವಲ್ಪ ದೂರ ಪ್ರಯಾಣ ಮಾಡಿದ ಮೇಲೆ ಚಂದ್ರವರ್ಮನ ದಾರಿಯಲ್ಲಿ ಥಕ್ಕನೆ ಪರ್ವತಗಳು ಕಾಣತೊಡಗಿದುವು. ಆ ಪರ್ವತಗಳನ್ನು ದಾಟಿ ಆಚೆಯ ಬದಿಗೆ ಹೋಗುವುದು ಹೇಗೆಂದು ತಿಳಿಯದಾಯಿತು. ಈ ಕಠಿಣ ಸಮಸ್ಯೆಗೆ ಏನು ದಾರಿಯೆಂದು ಚಂದ್ರವರ್ಮನು ನೋಡತೊಡಗಿದನು. ದಾರಿಯೇ ಇಲ್ಲದಂತೆ ಕಲ್ಲು ಬಂಡೆಗಳಿಂದ ಅಡಿಯಿಡಲಾಗದಂತಹ ಏರಿಳಿತಗಳ ಪ್ರದೇಶವದು.

ಆಹಾರ ಪದಾರ್ಥಗಳನ್ನು ಹೊತ್ತುಕೊಂಡು ಬರುವ ಹೇಸರಗತ್ತೆಗಳು ಜಾರಿ ಹೊರಳಿ ಬೀಳುವ ಜಾಗದಲ್ಲಿ ಪರ್ವತಗಳ ಮೇಲು ಭಾಗವನ್ನು ಏರುವುದು ಹೇಗೆ ? ಅಲ್ಲಿಂದಾಚೆಗೆ ಇಳಿಯುವುದು ಹೇಗೆ ? ಆಹಾರವು ಹೋಗಿಬಿಟ್ಟರೆ ಕಷ್ಟಪಟ್ಟು ಏರಿಯೂ ಏನು ಪ್ರಯೋಜನ ?

ಚಂದ್ರವರ್ಮನು ಎಲ್ಲರ ಕಡೆಗೂ ನೋಡಿ, "ಈಗ ನಾವು ಉಪವಾಸದಿಂದ ಸಾಯದಿರಬೇಕಾದರೆ, ಎಲ್ಲರೂ ಅವರವರ ಭುಜಗಳ ಮೇಲೆ ಹೊರುವಷ್ಟು ಮೂಟೆಗಳನ್ನು ಹೊತ್ತುಕೊಳ್ಳುವ




ದೊಂದೇ ದಾರಿ. ಹೇಸರಗತ್ತೆಗಳನ್ನು ಅವುಗಳ ಪಾಡಿಗೆ ಬದುಕುವಂತೆ ಕೆಳಗಿನ ಕಾಡಿನಲ್ಲಿ ಬಿಟ್ಟುಬಿಡ ಬೇಕಾಗದೆ " ಎಂದನು.

ಇದನ್ನು ಕೇಳಿ ಶಿವಸಿಂಹನ ರಾಜೋದ್ಯೋಗಿಗಳು ಮೊದಲು ಅಭ್ಯಂತರ ಹೇಳಿದರು. " ಈ ಬೆಟ್ಟಗಳಾಚೆಗೆ ಏನಿರುವುದೆಂದು ನಮಗೆ ಗೊತ್ತಿಲ್ಲ. ಬಹುಶಃ ಅಲ್ಲಿ ಆಹಾರ ಪದಾರ್ಥಗಳು ಸಿಗದೇ ಹೋದರೂ ಹೋದೀತು. ಹಾಗಿರುವಾಗ ಹೇಸರಗತ್ತೆಗಳ ಮೇಲಿರುವ ಆಹಾರ ಧಾನ್ಯಗಳಲ್ಲಿ ಹೆಚ್ಚಿನ ಭಾಗವನ್ನು ಇಲ್ಲಿಯ ಕಾಡಿನೊಳಗೆ ಬಿಟ್ಟು ಒಬ್ಬ ಮನುಷ್ಯ ಹೊತ್ತುಕೊಳ್ಳುವಷ್ಟು ಮಾತ್ರವೇ ಹೊತ್ತುಕೊಂಡು ಪರ್ವತಗಳ ಆಚೆಗೆ ಹೋಗುವುದು ಅಪಾಯಕರವಲ್ಲವೆ ? ಆ ಮೇಲೆ ಆಹಾರವಿಲ್ಲದೆ ಬಾಯಿ ಬಾಯಿ ಬಿಡಬೇಕಾಗಿ ಬಂದೀತಲ್ಲವೆ ? ಹಾಗೆ ಹೋಗಿ ಒಂದೆರಡು ದಿನ ಬದುಕಿ ಏನು ಲಾಭ ? " ಎಂದರು ಅವರು.

" ಈ ಪರ್ವತವನ್ನು ಏರಲು ಎಲ್ಲಿಯೂ ಕಾಲು ದಾರಿ ಕಾಣುವುದಿಲ್ಲ. ನಾವು ಕೊಕ್ಕೆ ಹಗ್ಗಗಳನ್ನು ಎಸೆದು ಸಿಕ್ಕಿಸಿ ಅವುಗಳ ಆಧಾರದಲ್ಲಿ ಬೆಟ್ಟವೇರಿ ಹೋಗಬೇಕಾಗಿದೆ. ಹಾಗಿರುವಾಗ ಹೇಸರಗತ್ತೆಗಳನ್ನು ಕೂಡಾ ಹಗ್ಗದಿಂದ ಬೆಟ್ಟದ ಮೇಲೆ ಎಳೆದುಕೊಳ್ಳಲು ಸಾಧ್ಯವೇ ? ಅದಕ್ಕೇ ಸ್ವಲ್ಪ ಆಹಾರ ಪದಾರ್ಥಗಳೂ, ಹೇಸರಗತ್ತೆಗಳೂ ನಮ್ಮ ಜತೆಯಲ್ಲಿ ಬೇಡವೆಂದೆನು. ಸರಿ ಬಿಡಿ. ಬೇರೇನಾದರೂ ಉಪಾಯ ಇಲ್ಲವಷ್ಟೆ ? ಇದ್ದರೆ ಹೇಳಿರಲ್ಲ ? " ಎಂದನು ಚಂದ್ರವರ್ಮ.

ಚಂದ್ರವರ್ಮನ ಮಾತಿಗೆ ನಾಲ್ವರು ರಾಜೋದ್ಯೋಗಿಗಳ ಹೊರತು ಉಳಿದವರು ಅದೇ ಸರಿಯೆಂದು ಹೇಳಿದರು. ಕೂಡಲೇ ಕತ್ತೆಗಳ ಬೆನ್ನ ಮೇಲಿನಿಂದ ಭಾರಗಳನ್ನು ಕೆಳಗಿಳಿಸಿ, ಅವುಗಳಲ್ಲಿ ಯಾರಿಗೆ ಎಷ್ಟು ಹೊರಲು ಸಾಧ್ಯವೋ ಅಷ್ಟನ್ನು ಮಾತ್ರ ಮೂಟೆಕಟ್ಟಿ ತಲೆಯ ಮೇಲೆಯೂ, ಕೆಲವರು ಹೆಗಲಲ್ಲಿಯೂ ಎತ್ತಿಕೊಂಡು ಎಲ್ಲರೂ ದಮ್ಮು ಬಿಗಿದುಕೊಂಡು ಪರ್ವತವನ್ನು ಏರಲು ಪ್ರಾರಂಭಿಸಿದರು.

ಹೀಗೆ ಪರ್ವತವೇರುವ ಪ್ರಯತ್ನವು ಬೆಳಿಗ್ಗೆ ಸೂರ್ಯೋದಯದ ಹೊತ್ತಿಗೆ ಪ್ರಾರಂಭವಾಯಿತು. ಸರಿಯಾಗಿ ನಡು ಮಧ್ಯಾಹ್ನದ ಹೊತ್ತಿಗೆ ಅವರು ಅರ್ಧ ಬೆಟ್ಟದ ಮೇಲಿನ ಒಂದಾನೊಂದು ಚದರ ಪ್ರದೇಶವನ್ನು ತಲಪಿದರು. ಅಲ್ಲಿ ಬಂದು ಅನ್ನ ಬೇಯಿಸಿ ತಿಂದು, ಸ್ವಲ್ಪಹೊತ್ತು ವಿಶ್ರಾಂತಿ ತೆಗೆದುಕೊಂಡುದೂ ಆಯಿತು. ಅನಂತರ ಮತ್ತೆ ಬೆಟ್ಟ ಹತ್ತುವ ಕೆಲಸ. ಹೋಗಿ ಹೋಗಿ ಸೂರ್ಯನು ಮುಳುಗಲು ಎರಡು ಗಳಿಗೆ ಹೊತ್ತಿರುವಾಗ ಅವರೆಲ್ಲ ಬೆಟ್ಟದ ಶಿಖರವನ್ನು ತಲಪಿದರು.

ಎಲ್ಲರಿಗಿಂತಲೂ ಮುಂದಾಗಿ ಶಿಖರವನ್ನು ಚಂದ್ರವರ್ಮನೂ ಸೇವಕರೂ, ತಮ್ಮ ಇದಿರಿನಲ್ಲಿರುವ

ಅದ್ಭುತ ದೃಶ್ಯವನ್ನು ನೋಡಿ ಆತ್ಮಾನಂದಪಡುತ್ತಿದ್ದರು. ಬೆಟ್ಟದ ಕೆಳಭಾಗದಲ್ಲಿ ಮಹಾನಗರವಿರುವುದನ್ನು ಅವರು ನೋಡುತ್ತಿದ್ದರು. ಆ ನಗರದ ಎತ್ತರವಾದ ಭವನಗಳ ಮೇಲೆ ಸೂರ್ಯನ ಸಂಜೆಯ ಕಾಂತಿಗಳು ಬಿದ್ದು ಕಣ್ಣುಗಳು ಕೋರೈಸುವಂತೆ ಮಿರುಗುಟ್ಟುತಿದ್ದುವು. ನಗರಕ್ಕೂ ಪರ್ವತಕ್ಕೂ ನಡುವಿನ ಪ್ರದೇಶದಲ್ಲಿ ಫಲವೃಕ್ಷಗಳ ತೋಟವೂ, ಪಚ್ಚೆಹಸುರಿನ ಹೊಲಗದ್ದೆಗಳೂ ಕಣ್ಣಿಗೆ ಹಬ್ಬವಾಗಿದ್ದುವು. ಒಟ್ಟಿನ ಮೇಲೆ ಬಹು ಸಮೃದ್ಧವಾದ ನಗರವಾಗಿತ್ತು, ಅದು. ಇಂತಹ ನಗರದ ಸಂಗತಿ ಶಿವಸಿಂಹ ರಾಜನ ಉದ್ಯೋಗಸ್ಥರಿಗೆ ಗೊತ್ತಾಗಲಿಲ್ಲವೆಂಬುದು ಆಶ್ಚರ್ಯವೇ.

ಈ ನಗರವು ಯಾರದು ? ಎಂತಹದು ? ಹೆಸರೇನು ? ಎಂದು ಚಂದ್ರವರ್ಮನು ತನ್ನೊಳಗೆ ಕೇಳಿಕೊಂಡು ಆಶ್ಚರ್ಯಪಡುತ್ತಿರಲು, ರಾಜೋದ್ಯೋಗಿಗಳಲ್ಲಿ ಒಬ್ಬನು ಅವನ ಸಮೀಪ ಬಂದು, ಕೆಳಗೆ ಕಾಣುವ ನಗರವನ್ನು ನೋಡಿ, ಬಹು ಸಂತೋಷದಿಂದ ಉಸಿರುಗಟ್ಟಿದವನಂತೆ, "ಅರರೇ ! ಶಿವಪುರ ! ಸಂದೇಹವೇ ಇಲ್ಲ! ಇದೇ ಶಿವಪುರ !" ಎಂದು ಕೂಗಾಡಿದನು.

"ಇದು ಶಿವಪುರವೆಂದು ನಿನಗೆ ಇಷ್ಟು ಖಚಿತವಾಗಿ ಹೇಗೆ ಗೊತ್ತಾಯಿತು ?" ಎಂದು ಕೇಳಿದನು ಚಂದ್ರವರ್ಮ.

"ಅಯ್ಯಾ, ಈ ಶಿವಪುರದಲ್ಲಿ ಸ್ವಲ್ಪಕಾಲದ ಕೆಳಗೆ ಒಂದು ತಿಂಗಳಷ್ಟು ದಿನಗಳು ನಾನು ಇದ್ದೆ. ಇದು ರುದ್ರಪುರ ರಾಜ್ಯದ ಪಶ್ಚಿಮ ದಿಕ್ಕಿನಲ್ಲಿರುವ ಮೇರೆಯ ಪಟ್ಟಣ. ಆಮೇಲೆ ಬರುವುದೆಲ್ಲಾ ಪೂರ್ತಿ ಮರುಭೂಮಿಯೇ. ಈ ಶಿವಪುರ ನಗರಕ್ಕೆ ರಾಜ ಪ್ರತಿನಿಧಿಯಾಗಿರುವ ವೀರಮಲ್ಲನು ನನಗೆ ಗುರುತಿನವನು. ಅಲ್ಲಿ ಕಾಣುವ ಭವನದ ಶಿಖರ ಕಲಶದಿಂದ ಇದು ಶಿವಪುರವೆಂದು ತಿಳಿದೆನು. ಹಿಂದೆ



ನಾನು ಇಲ್ಲಿಗೆ ಬಂದ ದಾರಿ ಯಾವುದೋ ಬೇರೆಯಾಗಿತ್ತು. ಆದ್ದರಿಂದಲೇ ಗೊತ್ತಾಗಲಿಲ್ಲ" ಎಂದನು ಆ ರಾಜೋದ್ಯೋಗಿ.

"ಹಾಗಾದರೆ ನಿನಗೆ ರುದ್ರಪುರದಿಂದ ಶಿವಪುರಕ್ಕೆ ಬರುವ ಸರಿಯಾದ ಬೇರೊಂದು ಮಾರ್ಗವು ಗೊತ್ತಿದ್ದಿತೆಂದೇ ಆಯಿತು. ಆ ಸಂಗತಿ ನನ್ನ ಹತ್ತಿರ ಬಾಯಿಬಿಡಲಿಲ್ಲವೇಕೋ ಆಶ್ಚರ್ಯವಾಗಿದೆ !" ಎಂದನು ಚಂದ್ರವರ್ಮ ತೀಕ್ಷ್ಣ ದೃಷ್ಟಿಯಿಂದ ಅವನನ್ನು ನೋಡುತ್ತಾ.

ಆ ಪ್ರಶ್ನೆಯನ್ನು ಕೇಳಿ ಆ ರಾಜೋದ್ಯೋಗಿ ಸ್ವಲ್ಪ ಹೆದರಿಕೊಂಡು, "ಅಯ್ಯಾ, ನಾನು ಹಿಂದೆ ಇಲ್ಲಿಗೆ ಬಂದ ದಾರಿ ಇದುವಲ್ಲ. ನಮ್ಮ ರುದ್ರಪುರ ರಾಜಧಾನಿಯಿಂದ ಈ ಶಿವಪುರಕ್ಕೆ ಬೇರೆಯೇ ಆದ ಒಂದು ಮಾರ್ಗವಿದೆ. ಅದು ಯಾವುದೋ ಒಂದು ಇರುಕಾಗಿ ಕಷ್ಟಸಾಧ್ಯದ ಅಡ್ಡದಾರಿ. ಅದು ಯಾವುದೆಂದು ನನಗೆ ನೆನಪಾಗುವುದಿಲ್ಲ" ಎಂದನು.

ಚಂದ್ರವರ್ಮನು ಆ ರಾಜೋದ್ಯೋಗಿಯೊಂದಿಗೆ ಮಾತಾಡುತ್ತಿರಲು, ಬೆಟ್ಟದ ಕೆಳಗಿನಿಂದ ಮೊಳಗುವ ಭೇರಿಯ ನಾದವು ಕೇಳತೊಡಗಿತು. ಅದಕ್ಕೆ ಉತ್ತರವೋ ಎಂಬಂತೆ ಪಟ್ಟಣದ ಪ್ರಾಕಾರದ ಮೇಲಿರುವ ಬುರುಜಿನ ಕಡೆಯಿಂದ ಭೀಕರಧ್ವನಿಯ ಢಂಕಾ ನಿನಾದವು ಹೊರಟಿತು. ನಗರದೊಳಗೆಲ್ಲಾ ಫಕ್ಕನೆ ಕಲಕಲರವವೆದ್ದ ಘೋಷವು ಮಂದವಾಗಿ ಕೇಳ ತೊಡಗಿತು. ಮರುಕ್ಷಣದಲ್ಲಿ ಬಿಲ್ಲಂಬುಗಳನ್ನೂ, ಈಟಿಗಳನ್ನೂ ಧರಿಸಿದ ಕೆಲವು ಸೈನಿಕರು ಬರುಜಿನ ಮೇಲೆ ಹತ್ತಿ ನಿಂತುದೂ ಕಾಣಿಸಿತು.

ತಮ್ಮನ್ನು ಯಾರೋ ಶತ್ರುಗಳೆಂದು ಭಾವಿಸಿ ನಗರ ರಕ್ಷಕರು ಈ ಸಂಕೇತಗಳಿಂದ ಎಚ್ಚರಿಕೆಯ ಚಟುವಟಿಕೆಗಳಲ್ಲಿ ತೊಡಗಿದರೆಂದು ಚಂದ್ರವರ್ಮನಿಗೆ ತಿಳಿಯಿತು.

ಬುರುಜಿನ ಮೇಲಿರುವ ಸೈನಿಕರು ತಮ್ಮ ಮೇಲೆ ಬಾಣಗಳನ್ನು ಪ್ರಯೋಗಿಸುವುದಕ್ಕೆ ಮೊದಲೇ, ತಾವು ಶತ್ರುಗಳಲ್ಲವೆಂದೂ, ಮಿತ್ರರೆಂದೂ ಅವರಿಗೆ ತಿಳಿಸಬೇಕಾದುದು ಅಗತ್ಯವೆಂದು ಅವನಿಗೆ ತೋರಿತು. ಕೂಡಲೇ ಚಂದ್ರವರ್ಮನು ಒಂದು ಬಿಳೀ ಬಟ್ಟೆಯನ್ನು ಕತ್ತಿಯ ಮೊನೆಗೆ ಸಿಗಿಸಿ ಮೇಲೆತ್ತಿ ಗಾಳಿಯಲ್ಲಿ ಓಲಾಡಿಸಿದನು.

ಅತ್ತ ಬುರುಜಿನ ಮೇಲಿರುವ ಸೈನಿಕರು ಕೆಲವು ಕ್ಷಣಗಳವರೆಗೆ ಪರ್ವತ ಶಿಖರವನ್ನು ನೋಡುತ್ತ ಸುಮ್ಮನಿದ್ದರು. ಅಷ್ಟರಲ್ಲಿ ಆಜಾನುಬಾಹುವಾದ ಒಬ್ಬನು ಸೈನಿಕರನ್ನು ಆಚೀಚೆ ತಳ್ಳುತ್ತ ಮುಂದೆ ಬಂದು ಬಿಲ್ಲನ್ನು ಎತ್ತಿಹಿಡಿದು ಚಂದ್ರವರ್ಮನ ಕಡೆಗೆ ಬಾಣ ಪ್ರಯೋಗ ಮಾಡಿದನು. ಚಂದ್ರವರ್ಮನು ತಟ್ಟನೆ ಬದಿಗೆ ಹಾರಿಕೊಂಡಾಗ, ರಿವ್ವೆಂಬ ಶಬ್ದದಿಂದ ಆ ಬಾಣವು ಬಂದು ಚಂದ್ರವರ್ಮನ ಮುಂದೆ ಸ್ವಲ್ಪದೂರ ನೆಲದಲ್ಲಿ ಚುಚ್ಚಿಕೊಂಡಿತು. ಅದರಲ್ಲಿ ಒಂದು ಪತ್ರವನ್ನು ಕಟ್ಟಲ್ಪಟ್ಟಿತ್ತು.

ಚಂದ್ರವರ್ಮನು ಆತುರದಿಂದ ಆ ಬಾಣವನ್ನು ಕಿತ್ತು ಪತ್ರವನ್ನು ಬಿಡಿಸಿ ಓದಿದನು. ಶಿವಪುರದ ಕೋಟೆಯ ರಕ್ಷಕ ದಳನಾಯಕನು, ಬಂದವರ



ಹೆಸರು, ಊರು, ಬಂದ ಕೆಲಸ, ಮುಂತಾದುವನ್ನು ಮುಚ್ಚುಮರೆಯಿಲ್ಲದೆ ತಿಳಿಸಬೇಕೆಂದು ಕೇಳುತ್ತಿದ್ದಾನೆ. ಕೂಡಲೇ ಸರಿಯಾದ ಉತ್ತರ ಬಾರದೆ ಹೋದರೆ, ಶತ್ರುಗಳೆಂದು ಭಾವಿಸಿ ಸರ್ವನಾಶನ ಮಾಡುವೆನೆಂದು ಎಚ್ಚರಿಸಿದ್ದಾನೆ.

ಚಂದ್ರವರ್ಮನು, ಸಂತೋಷದಿಂದ ತನ್ನ ಹತ್ತಿರವಿರುವ ರುದ್ರಪುರದ ರಾಜ ಶಿವಸಿಂಹನು ಕೊಟ್ಟ ಆಜ್ಞಾಪತ್ರವನ್ನು ಬಾಣಕ್ಕೆ ಕಟ್ಟಿ, ಅದು ಕೋಟೆಯ ಬುರುಜಿನ ಮೇಲೆ ಬೀಳುವಂತೆ ಬಿಲ್ಲಿಗೆ ಸಂಧಿಸಿ ಪ್ರಯೋಗಿಸಿದನು.

ಸ್ವಲ್ಪಹೊತ್ತಿಗೆಲ್ಲ ಬುರುಜಿನ ಮೇಲೆ ಸಂತೋಷ ಸಂಭ್ರಮಗಳ ಭಾರಿ ಕೋಲಾಹಲವೆದ್ದಿತು. ಚಂದ್ರವರ್ಮನನ್ನೂ, ಅವನ ಅನುಚರರನ್ನೂ ಆಹ್ವಾನಿಸುವುದರ ಸೂಚನೆಯಾಗಿ ಸೈನಿಕರು ಜಯಜಯ ಧ್ವಾನಗಳನ್ನು ಜೋರು ಜೋರಾಗಿ ಮಾಡತೊಡಗಿದರು. ಇನ್ನು ಅಲ್ಲಿಗೆ ಹೋಗಲು ಯಾವ ಭಯವೂ ಇಲ್ಲ.

ಪರ್ವತದ ಮೇಲಿನಿಂದ ನಗರದ ಕಡೆಗೆ ಇಳಿಯುವ ಕಲ್ಲು ಮೆಟ್ಟಿಲುಗಳ ಮೇಲಿನಿಂದಾಗಿ, ಚಂದ್ರವರ್ಮನೂ ಅವನೊಂದಿಗಿರುವವರೂ ಇಳಿದರು. ಹಾಗೆ ಇಳಿದು ಸ್ವಲ್ಪ ಮುಂದೆ ನಡೆದ ಕೂಡಲೇ ಕೋಟೆಯ ಸುತ್ತಲೂ ಇರುವ ಅಗಳ್ತೆಯನ್ನು ತಲಪಿದರು.

ಅಷ್ಟು ಹೊತ್ತಿಗೆ ಕೆಲಮಂದಿ ಸೈನಿಕರು ಬಂದು ಗುಂಪುಗೂಡಿದರು. ಚಂದ್ರವರ್ಮನು ಅವರನ್ನು ನೋಡಿದ ಕೂಡಲೇ ಆಶ್ಚರ್ಯದಿಂದಲೂ ಆನಂದದಿಂದಲೂ ತುಂಬಿ ತುಳುಕಿದನು. ಅದಕ್ಕೆ ಕಾರಣವೇನೆಂದರೆ ಆ ಸೈನಿಕರಿಗೆಲ್ಲಾ ಸೇನಾನಾಯಕನ ದುಸ್ತಿನಲ್ಲಿ ಮುಂದಿದ್ದವನು ಅವನ ಅಚ್ಚುಮೆಚ್ಚಿನ ಸುಬಾಹುವೇ ! ಅವನು ಬದುಕಿಯೇ ಇದ್ದಾನೆ !

ಸುಬಾಹು ಕೂಡಾ ತಮ್ಮ ಯುವರಾಜನಾದ ಚಂದ್ರವರ್ಮನನ್ನು ಗುರುತಿಸಿಬಿಟ್ಟನು. ಮರುಕ್ಷಣದಲ್ಲಿ ಅವನು ಚಂದ್ರವರ್ಮನಿಗೆ ಗುರುತಿಸಬೇಡವೆಂದು ಸನ್ನೆಯಿಂದ ತಿಳಿಸಿದನು. ತಾವು ಒಬ್ಬರ





ನ್ನೊಬ್ಬರು ಗುರುತಿಸಿಕೊಂಡುದು ಇತರರಿಗೆ ತಿಳಿಯ ಬಾರದೆಂಬುದೇ ಅವನ ಉದ್ದೇಶ. ಚಂದ್ರವರ್ಮ ನಿಗೆ ಆ ಸೂಚನೆ ಅರ್ಥವಾಯಿತು. ಅವನು ಚಕಚಕನೆ ಮುಂದಕ್ಕೆ ನಡೆದು ಸುಬಾಹುವನ್ನು ಸಮೀಪಿಸಿ ಸಗೌರವದಿಂದ ಅವನಿಗೆ ನಮಸ್ಕಾರ ಮಾಡಿ, "ನೀವು ಈ ಶಿವಪುರದ ಸೇನಾನಾಯಕರೇ ? ಬಹಳ ಸಂತೋಷ. ನಾನು ರಾಜ ಪ್ರತಿನಿಧಿಗಳಾದ ವೀರಮಲ್ಲರನ್ನು ಕಾಣಬೇಕಾಗಿದೆ. ಅವರೊಂದಿಗೆ ಕೆಲವು ಮುಖ್ಯ ವಿಷಯ ಮಾತಾಡಬೇಕಾಗಿದೆ" ಎಂದನು.

"ಅದಕ್ಕೇನೂ ತಡೆಯಿಲ್ಲ. ಒಳ್ಳೆಯದು, ಬಹಳ ಸಂತೋಷ. ಮೊದಲು ನಿಮಗೂ ನಿಮ್ಮ ಅನುಚರ ರಿಗೂ ಬಿಡದಿ, ಭೋಜನಗಳ ಸದುಪಾಯಗಳನ್ನು ಏರ್ಪಡಿಸೋಣ. ವಿಶ್ರಾಂತಿ ತೆಗೆದುಕೊಂಡ ಮೇಲೆ ನೀವು ರಾಜ ಪ್ರತಿನಿಧಿಗಳ ದರ್ಶನ ಮಾಡಬಹುದು" ಎಂದು ಹೇಳಿ ಸುಬಾಹು ತನ್ನೊಂದಿಗಿದ್ದ ಸೈನಿಕರಿಗೆ ಚಂದ್ರವರ್ಮನ ಕಡೆಯವರನ್ನು ತೋರಿಸಿ, ಅವರ ನ್ನೆಲ್ಲ ಆದರಿಸಿ ಅತಿಥಿ ಶಾಲೆಗೆ ಕರೆದೊಯ್ದು, ಉಪಚರಿಸುವ ಹೊಣೆ ಹೊರಿಸಿದನು.

ಚಂದ್ರವರ್ಮನ ಅನುಚರರು ಸೈನಿಕರೊಂದಿಗೆ ಕೋಟೆಯೊಳಗೆ ಹೊರಟುಹೋದ ಮೇಲೆ, ಸುಬಾಹು ಅತ್ಯಂತ ಭಕ್ತಿ ವಿಧೇಯತೆಗಳಿಂದ ಚಂದ್ರವರ್ಮನಿಗೆ ಕೈಮುಗಿದು, "ಮಹಾರಾಜಾ ! ನಾನು ತುಂಬಾ ಪುಣ್ಯ ಮಾಡಿದ ಅದೃಷ್ಟಶಾಲಿ ! ಈ ಜನ್ಮದಲ್ಲಿ ಮತ್ತೆ ನಿಮ್ಮ ದರ್ಶನಭಾಗ್ಯ ಲಭಿಸುವುದೆಂದು ತಿಳಿದಿರಲಿಲ್ಲ. ಏನೇನೋ ಕೇಳಬೇಕೆಂದು ಉಕ್ಕಿ ಕೊಂಡಿದ್ದೇನೆ. ಮನೆಗೆ ಹೋಗಿ ಎಲ್ಲಾ ಸಂಗತಿ ಗಳನ್ನೂ ನೆಮ್ಮದಿಯಾಗಿ ಮಾತಾಡಿಕೊಳ್ಳೋಣ, ಬನ್ನಿ" ಎಂದು ಹೇಳಿ ಚಂದ್ರವರ್ಮನನ್ನು ಕೋಟೆ ಯೊಳಗೆ ಕರೆದುಕೊಂಡು ಹೋದನು.

ಚಂದ್ರವರ್ಮನು ಸುಬಾಹುವಿನ ಮನೆಗೆ ಹೋದ ಸ್ವಲ್ಪಹೊತ್ತಿಗೆ ಅವನನ್ನು ಕುರಿತು ಸರ್ವ ವಿವರ ಗಳನ್ನೂ ತಿಳಿದುಕೊಂಡನು. ಆ ದಿನ ಸರ್ಪಕೇತು ವಿನ ಸೈನಿಕರ ಕೈಗೆ ಸಿಗದಂತೆ ತಪ್ಪಿಸಿಕೊಳ್ಳಲು ಚಂದ್ರವರ್ಮನೊಂದಿಗೆ ಅವನೂ ನದಿಗೆ ಧುಮುಕಿದ ಮೇಲೆ ಸುಬಾಹು ಏನಾದನೋ ಚಂದ್ರವರ್ಮನಿಗೆ ಗೊತ್ತಾಗಲಿಲ್ಲ.

ಸುಬಾಹು ಒಂದಾನೊಂದು ಕಣಿವೆಯ ತೀರವನ್ನು ಸೇರಿ, ಕೆಲವು ದಿನಗಳ ಮೇಲೆ ಧೀರಮಲ್ಲನನ್ನು ಆ ಗುಡ್ಡದಲ್ಲೇ ಸಂಧಿಸಿದನು. ಸರ್ಪಕೇತುವಿನೊಂದಿಗೆ ನಡೆದ ಕೊಟ್ಟಕೊನೆಯ ಹೋರಾಟದಲ್ಲಿ ಧೀರಮಲ್ಲನು ಪೂರ್ತಿ ಸೋತು ಹೋಗಿ ಉಳಿದ ಕೆಲವಾರು ಅನುಚರರೊಂದಿಗೆ ಬೆಟ್ಟಗಳಲ್ಲಿಯೂ, ಕಾಡುಗಳಲ್ಲಿಯೂ ತಲೆಮರೆಸಿ ಕೊಳ್ಳಬೇಕಾಗಿ ಬಂದಿತ್ತು. ಹಾಗೆ ಎಲ್ಲೆಲ್ಲೋ ತಿರುಗಿ ಕೆಲವು ದಿನಗಳ ಮೇಲೆ ಎಲ್ಲರೂ ಕೂಡಿ, ರುದ್ರ ಪುರದ ರಾಜನಾದ ಶಿವಸಿಂಹನ ಆಸ್ಥಾನವನ್ನು ಸೇರಿ,



ಅವನಿಂದ ಶಿವಪುರಕ್ಕೆ ಕಳುಹಿಸಲ್ಪಟ್ಟರು. ಶಿವಸಿಂಹನ ಆಸ್ಥಾನದಲ್ಲಿ ಸೇರಿದಾಗಲೇ ಧೀರಮಲ್ಲನು ತನ್ನ ಹೆಸರು ವೀರಮಲ್ಲನೆಂದು ಹೇಳಿಕೊಂಡನು. ಅಪ್ಪಿ ತಪ್ಪಿಯಾದರೂ ತನ್ನ ಹೆಸರು ಕ್ರೂರನಾದ ಸರ್ಪಕೇತುವಿಗೆ ತಿಳಿಯಬಾರದೆಂತಲೇ ಬಹು ಜಾಗರೂಕತೆಯುಲ್ಲಿ ಹಾಗೆ ಪ್ರವರ್ತಿಸಿದ್ದನು.

ಚಂದ್ರವರ್ಮನು ಕೂಡಾ ಸುಬಾಹುವಿನೊಂದಿಗೆ ತಾನು ನದಿಯುಲ್ಲಿ ಹಾರಿದ ಮೇಲೆ ನಡೆದ ಸಂಘಟನೆಗಳನ್ನೆಲ್ಲಾ ಅವನೊಂದಿಗೆ ವಿವರವಾಗಿ ಹೇಳಿದನು. ಹೀಗೆ ಪರಸ್ಪರ ಹೇಳಿ ಮುಗಿದ ಮೇಲೆ, ಚಂದ್ರವರ್ಮನು ತಾನು ಪ್ರಸ್ತುತ ಹೊರಟು ಬಂದ ಕಾರ್ಯವನ್ನು ಕುರಿತು ಹೇಳುತ್ತ, ಕಂಚುಕೋಟೆಯ ಸಂಗತಿ ಹೊರಪಡಿಸುತ್ತಲೇ, ಸುಬಾಹು ತುಂಬಾ ಬೆರಗಾದನು.

"ಮಹಾರಾಜಾ, ನಮಗೆ ಕಷ್ಟಕಾಲ ಕಳೆದು ಒಳ್ಳೆಯ ಕಾಲವು ಸಮೀಪಿಸುತ್ತಾ ಇದೆ. ನಿಜ ಸಂಗತಿ ಏನೆಂದರೆ ಸೇನಾನಿ ಧೀರಮಲ್ಲನು ಈಗ ಪಟ್ಟಣದಲ್ಲಿಲ್ಲ. ಈ ಸಂಗತಿ ಬೇರೆ ಯಾರಿಗೂ ಗೊತ್ತಾಗದಂತೆ ರಹಸ್ಯವಾಗಿಟ್ಟದ್ದೇವೆ. ಸರ್ಪಕೇತು ಸೈನ್ಯವನ್ನು ಹಿಂದಿಟ್ಟುಕೊಂಡು ಕಂಚುಕೋಟೆಯ ಕಡೆಗೇ ಹೊರಟಿರುವಂತೆ ನಮಗೆ ಗೊತ್ತಾಗಿದೆ. ಅವನ ಬಲಗಳು ಎಷ್ಟೆಂದು ತಿಳಿದು, ಸಾಧ್ಯವಾದರೆ ಅವನನ್ನು ಮಾರ್ಗ ಮಧ್ಯದಲ್ಲೇ ತುಳಿದುಹಾಕಲು ಸೇನಾನಿ ಧೀರಮಲ್ಲನು ರಹಸ್ಯವಾಗಿ ಸ್ವಲ್ಪ ಸೈನ್ಯವನ್ನೂ ತೆಗೆದುಕೊಂಡು ಎರಡು ದಿನಗಳ ಹಿಂದೆ ಹೊರಟುಹೋಗಿದ್ದಾನೆ. ಇದು ಇಲ್ಲಿ ಯಾರಿಗೂ ತಿಳಿಯದು" ಎಂದನು ಸುಬಾಹು.

ಘಾತಕನಾದ ಸರ್ಪಕೇತುವಿನ ಹೆಸರು ಕೇಳಿದ ಕೂಡಲೇ ಚಂದ್ರವರ್ಮನಿಗೆ ಮೈಪೂರಾ ಉದ್ರೇಕದಿಂದ ಉರಿಯಿತು. ಅದನ್ನು ನೋಡಿ ಸುಬಾಹು, "ಮಹಾರಾಜಾ, ಈಗ ಆ ಸರ್ಪಕೇತು ನಮ್ಮ ವೀರಪುರಕ್ಕೆ ಮಾತ್ರವಲ್ಲದೆ, ಎಲ್ಲಾ ಮಾಹಿಷ್ಮತೀ ರಾಜ್ಯಕ್ಕೇ ಚಕ್ರವರ್ತಿಯಾಗಿದ್ದಾನೆ. ಯಶೋವರ್ಧನ ಚಕ್ರವರ್ತಿಗಳು ಕಾಲಗತಿ ಹೊಂದಿದರು. ಅವರ ಹಿರಿಯ ಮಗ ತಪೋವರ್ಧನನು ವೈರಾಗ್ಯ ತಾಳಿ ಅರಣ್ಯಕ್ಕೆ ಹೋಗಿದ್ದಾನೆ. ತಾನು ಸಹಾಯ ಮಾಡುವೆನೆಂದು ನಂಬಿಸಿ, ಗುಣವರ್ಧನನೊಂದಿಗೆ ತನ್ನ ಅಗತ್ಯವು ತೀರಿದ ಕೂಡಲೇ ಸರ್ಪಕೇತು ಅವನನ್ನು ಕೊಂದು ಮಾಹಿಷ್ಮತೀ ರಾಜ್ಯಕ್ಕೆ ಪಟ್ಟಾಭಿಷೇಕ ಮಾಡಿಸಿಕೊಂಡು ಚಕ್ರವರ್ತಿಯಾಗಿ ಮೆರೆಯುತ್ತಿದ್ದಾನೆ. ಸರ್ವಾಧಿಕಾರಿಯಾದ ಅವನನ್ನು ಈಗ ಯಾರೂ ಕೇಳುವವರಿಲ್ಲದಂತಾಗಿದೆ" ಎಂದನು.

"ಇಷ್ಟೊಂದು ರಾಜ್ಯಲಾಭವಾಗಿಯೂ ಕೂಡಾ ಆ ದುಷ್ಟನಿಗೆ ಇನ್ನೂ ಧನದಾಹ ತೀರಲಿಲ್ಲವೆಂದು ಹೇಳು. ಕಂಚುಕೋಟೆಯುಲ್ಲಿರುವ ಸಂಪತ್ತುಗಳಿಗಾಗಿ ಈಗ ಹೊರಟಿದ್ದಾನೇನು! ಭೇಷ್!" ಎಂದನು ಚಂದ್ರವರ್ಮ ಹಲ್ಲು ಕಡಿಯುತ್ತ

"ಸರ್ಪಕೇತುವಿನ ಈ ಜೈತ್ರಯಾತ್ರೆಗೆ ಬರೀ ಧನದಾಹವು ಮಾತ್ರ ಕಾರಣವಲ್ಲ, ಮಹಾರಾಜಾ, ರಾಜ್ಯದಾಹವೂ ಸೇರಿದೆ. ಯಾವುದು ಹೇಗಿದ್ದರೂ ಅವನು ಈ ಶಿವಪುರದ ಮೇಲೆ ಆಕಸ್ಮಾತ್ತಾಗಿ ದಾಳಿ ತೆಗೆಯದಿರುವುದೊಂದು ಅದೃಷ್ಟವೇ ಅನ್ನಬೇಕು. ಗೂಢಚಾರರ ಮೂಲಕವಾಗಿ ಅವನು ಯಾವ ದಾರಿ ಹಿಡಿದಿರುವನೆಂಬುದು ನಮಗೆ ಮುಂದಾಗಿ ಗೊತ್ತಾಗಿ ಹೋದುದೊಂದು ಪುಣ್ಯ!" ಎಂದನು ಸುಬಾಹು.

ಹೀಗೆ ಅವರಿಬ್ಬರೂ ಮಾತಾಡಿಕೊಂಡಿರುವಾಗ ದೂತನೊಬ್ಬನು ಬಂದು, ಸುಬಾಹುವಿನ ಕೈಗೆ ಒಂದು ಪತ್ರವನ್ನು ಕೊಟ್ಟನು.

ಸುಬಾಹು ಅದನ್ನು ಬಿಚ್ಚಿ ಓದಿದ ಕೂಡಲೇ ತಬ್ಬಿಬ್ಬಾಗಿ, ಪೂರ್ತಿ ಓದಿದ ಮೇಲೆ ಪತ್ರವನ್ನು ಚಂದ್ರವರ್ಮನಿಗೆ ಕೊಟ್ಟನು.

ಚಂದ್ರವರ್ಮನು ಆ ಪತ್ರವನ್ನು ಓದಿದನು. ಅದನ್ನು ಸೇನಾನಿ ಧೀರಮಲ್ಲನು ಸುಬಾಹುವಿಗೆ ಬರೆದಿದ್ದನು. ಅದರಲ್ಲಿದ್ದ ವಿಷಯವೇನೆಂದರೆ, ಧೀರಮಲ್ಲನು ತನ್ನ ಸ್ವಲ್ಪ ಮಾತ್ರ ಸೈನ್ಯದೊಂದಿಗೆ, ಸರ್ಪಕೇತುವಿನ ದೊಡ್ಡ ಸೈನ್ಯ ಸಮೂಹವನ್ನು ಶಿವಪುರದ ಉತ್ತರ ದಿಕ್ಕಿನಲ್ಲಿರುವ ಮರಳುಗಾಡಿನ ಪ್ರದೇಶದಲ್ಲಿ ನೋಡಿರುತ್ತಾನೆ. ಆದರೆ ಸರ್ಪಕೇತುವಿನ ಸಾವಿರಾರು ಮಂದಿ ಸೈನಿಕರೊಂದಿಗೆ ತಾನು ಮುಖಾಮುಖೀ ಹೋರಾಟಕ್ಕಿಳಿಯುವುದು ಅಪಾಯಕಾರಿ ಎಂದು ತಿಳಿದು ಹಿಂದಿರುಗಲಿರುವಾಗ, ಸರ್ಪಕೇತುವಿಗೆ ಈ ಸಂಗತಿ ಗೊತ್ತಾಗಿ ಹೋಯಿತು. ಕೂಡಲೇ ಅವನು ಸ್ವಲ್ಪ ಸೈನ್ಯವನ್ನು ಹಿಂದಿಟ್ಟು ಕೊಂಡು ಧೀರಮಲ್ಲನ ಬೆಂಬತ್ತಿ ಬಂದನು. ಧೀರಮಲ್ಲನು ತನ್ನ ಸ್ವಲ್ಪ ಸೈನ್ಯದೊಂದಿಗೆ ಶಿವಪುರದ ಕಡೆಗೆ ಓಡಿ ಬರುತ್ತಿದ್ದಾನೆ. ಆ ಕಾರಣದಿಂದ ನಗರದಲ್ಲಿ ಸ್ವಲ್ಪ ಸೈನ್ಯವನ್ನು ಬಿಟ್ಟು, ಸುಬಾಹು ದೊಡ್ಡ ಸೇನೆಯೊಂದಿಗೆ ತನಗೆ ಸಹಾಯ ಮಾಡಲು ಧಾವಿಸಿ ಬರಬೇಕೆಂದು ಧೀರಮಲ್ಲನು ಕೇಳುತ್ತಿದ್ದಾನೆ.

"ಇದು ಇದಿರು ನೋಡದಂತಹ ದುರ್ಘಟನೆ, ಮಹಾರಾಜಾ. ಸೇನಾನಿ ಧೀರಮಲ್ಲನು ಈ ನಗರದ ರಕ್ಷಣೆಗಳನ್ನು ಮಾಡಿಕೊಳ್ಳುವುದಕ್ಕೆ ಮೊದಲೇ ಸರ್ಪಕೇತುವಿನೊಂದಿಗೆ ಯುದ್ಧವು ಪ್ರಾರಂಭವಾಗಿ ಬಿಟ್ಟರೆ, ಮೊದಲು ಧೀರಮಲ್ಲನಿಗೆ ಸೋಲು ತಪ್ಪುವಂತಿಲ್ಲ. ಅದಾದ ಮೇಲೆ ಅದರ ಬೆನ್ನಿಗೆ ನಮ್ಮ ಶಿವಪುರಿ ನಗರದ ನಾಶನವೂ ತಪ್ಪದೇ ನಡೆಯುತ್ತದೆ. ನಾವು ಬಲು ಬೇಗದಲ್ಲಿ ಸೇನೆಯೊಂದಿಗೆ ಅವನ ರಕ್ಷಣೆಗೆ ಹೋಗುವುದೇ ಒಳ್ಳೆಯದು, ಅಗತ್ಯವಾಗಿ ಹೋಗಲೇ ಬೇಕು" ಎಂದನು ಸುಬಾಹು.

—(ಇನ್ನೂ ಇದೆ)






# ನಾಗಕನ್ಯೆ

ಒಂದು ದಿನ ಈ ರಾಜನು ತನ್ನ ಪ್ರಶ್ನೆಗೆ ಉತ್ತರ ಹೇಳಲಾಗದೆ ತಲೆಯೊಡೆದು ಸಾಯುವನೆಂದು ಕೊಂಡು ಬೇತಾಳವು ಶವದೊಳಗೆ ಸೇರಿ ನೇತಾಡುತ್ತಾ ನಿರೀಕ್ಷಿಸುತ್ತಿದ್ದಂತೆ, ಮತ್ತೆ ಬಂದ ರಾಜಾ ತ್ರಿವಿಕ್ರಮನು ಮರಹತ್ತಿ ಕೊಂಬೆಯಿಂದ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು, ಮೌನವಾಗಿ ಸ್ಮಶಾನದ ಕಡೆಗೆ ಹೋಗತೊಡಗಿದನು. ಆಗ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ ! ಮತ್ತೆ ಮತ್ತೆ ನೀನು ಬಂದು ಹೀಗೆ ಶ್ರಮ ಪಡುವುದರಿಂದ ನಿನಗೇನು ಪ್ರಯೋಜನವೋ ನನಗಂತೂ ತಿಳಿಯುವುದಿಲ್ಲ. ಒಂದು ಸಂಗತಿ ನೆನಪಿಟ್ಟುಕೋ. ಲೋಕದಲ್ಲಿ ಎಷ್ಟೋ ಮಂದಿ ಸರಳಗುಣದ ಅಮಾಯಕರು, ತಮಗೆ ಬಂದ ಅವಕಾಶವನ್ನು ಜಾರಬಿಡುವುದುಂಟು. ಧೀರ ಚಂದ್ರನೇ ಇದಕ್ಕೆ ಸಾಕ್ಷಿ. ನೀನೂ ಅಂತಹವನಾಗಿರಬೇಕೆಂದು ನನಗೆ ಅನುಮಾನವಾಗುತ್ತದೆ. ಅವನ ಕಥೆ ಹೇಳುತ್ತೇನೆ. ಕೇಳುತ್ತಾ ನಡೆಯುವಾಗ ನಿನಗೆ ಕಷ್ಟವು ಗೊತ್ತಾಗಲಾರದು" ಎಂದು ಕಥೆಯನ್ನು ಪ್ರಾರಂಭಿಸಿತು :

## ಬೇತಾಳಕಥೆಗಳು?..



ಒಂದು ದಿನ ಕೌಮುದಿ ಎಂಬ ನಾಗಕನ್ಯೆ ಮೊತ್ತ ಮೊದಲನೇ ಸಾರಿಯಾಗಿ ಪಾತಾಳದಿಂದ ಭೂಮಿಯ ಮೇಲೆ ಬಂದು, ಮಾನವಿಯ ರೂಪ ತಾಳಿ ಕೊಂಡು ನದಿಯ ತೀರದಲ್ಲಿ ವಿಹರಿಸಿಕೊಂಡಿದ್ದಳು. ಭೂಲೋಕದ ವಾತಾವರಣವು ಅವಳಿಗೆ ಬಹಳ ಆಹ್ಲಾದಕರವಾಗಿದ್ದಿತು. ಸುತ್ತುಮುತ್ತಲಿನ ದೃಶ್ಯವನ್ನು ನೋಡುತ್ತಾ ಪರವಶಳಾಗುತ್ತಿದ್ದಳು.

"ಆಹ! ಇಲ್ಲಿಯ ಮಾನವರು ತುಂಬಾ ಅದೃಷ್ಟಶಾಲಿಗಳೇ ನಿಜ!" ಎಂದು ಅವಳು ಅಂದುಕೊಂಡಿದ್ದಾಗ, ಒಬ್ಬ ಯುವಕನು ಅತ್ತ ಕಡೆಗೇ ಬರುತ್ತಿರುವುದು ಕಾಣಿಸಿತು.

ಆ ಯುವಕನ ಹೆಸರು ಧೀರಚಂದ್ರ. ಒಂದು ಕಾಲದಲ್ಲಿ ಶ್ರೀಮಂತಿಕೆಯ ಕುಟುಂಬದಲ್ಲಿ ಚೆನ್ನಾಗಿ ಬದುಕಿದ್ದವನು ಈಗ ದೀನಸ್ಥಿತಿಗೆ ಬಂದಿದ್ದನು. ಈಗ ಅವನ ಆರೋಗ್ಯವೂ ಕೆಟ್ಟಿತ್ತು. ವೈದ್ಯನ ಚಿಕಿತ್ಸೆಗಾಗಿ ಹಣ ಬೇಕಾಗಿತ್ತು. ಎರಡು ವರ್ಷಗಳ ಕೆಳಗೆ ಬೆಳೆ ಸರಿಯಾಗಿ ಬಾರದೆ ಸಾಲ ಮಾಡಬೇಕಾಗಿ ಬಂದು, ಬಡ್ಡಿಯಿಂದ ನೆನೆದುಹೋಗಿದ್ದನು. ಈ ವರ್ಷ ಕೂಡಾ ಕಳೆದ ವರ್ಷದ ಬೆಳೆಗಳು ಮನೆ ಖರ್ಚಿಗೆ ಸಾಲದೆ, ಮತ್ತಿಷ್ಟು ಸಾಲ ಮಾಡಿದ್ದನು. ಸಾಲ ಕೊಟ್ಟವರ ಹಳಿಕೆ ಮಾತುಗಳನ್ನು ಸಹಿಸಲಾಗದೆ ಅವನ ತಂದೆ ಆರು ತಿಂಗಳ ಕೆಳಗೆ ಹೇಳದೆ ಕೇಳದೆ ಮನೆ ಬಿಟ್ಟು ಎಲ್ಲಿಗೋ ಹೊರಟು ಹೋಗಿದ್ದನು. ಎಲ್ಲಿಗೆ ಹೋದನೋ ಎಲ್ಲಿ ಏನು ಮಾಡುವನೋ ಈವರೆಗೂ ಅದೇನೂ ತಿಳಿಯದು.

ಏನು ಮಾಡಲೂ ತೋರದೆ ಧೀರಚಂದ್ರನು ಒಂದು ವಾರದ ಕೆಳಗೆ ತಾತನ ಕಾಲದ ಮನೆಯನ್ನು ಸಾಲ ತೀರಿಸಲಿಕ್ಕಾಗಿ ಮಾರಿಬಿಟ್ಟನು. ದುರದೃಷ್ಟದಿಂದ ಆ ದಿನ ರಾತ್ರಿಯೇ ಅವನ ಮನೆಯಲ್ಲಿ ಕಳ್ಳತನವಾಯಿತು. ಮಾರಾಟದಲ್ಲಿ ಸಿಕ್ಕಿದ ಹಣವೆಲ್ಲಾ ಹೋಯಿತು. ಮನೆ ಕೊಂಡುಕೊಂಡವನು ಒಂದು ವಾರದೊಳಗೆ ಮನೆಯನ್ನು ಖಾಲೀ ಮಾಡಿಬಿಟ್ಟು ಕೊಡಬೇಕೆಂದು ಹೇಳಿದ್ದನು. ಆ ಗಡು ಇಂದಿಗೆ ಮುಗಿಯುತ್ತದೆ.

ಅನಾರೋಗ್ಯದಿಂದ ಹಾಸಿಗೆ ಹಿಡಿದ ತಾಯಿ, ಸಾಲದವರ ಕಾಟ, ಇವೆರಡರ ನಡುವೆ ಅವನಿಗೆ ನಿಲ್ಲಲು ನೆರಳಿಲ್ಲದ ಪರಿಸ್ಥಿತಿ ಬಂದಿತ್ತು. ನಾಳಿನಿಂದ ಏನು ಮಾಡುವುದೆಂದು ತೋರದೆ ಧೀರಚಂದ್ರನು ನದಿಯ ತೀರಕ್ಕೆ ಬಂದು ಸುಮ್ಮನೆ ಕುಳಿತುಬಿಟ್ಟನು. ನಾಗಕನ್ಯೆ ಕೌಮುದಿ ಧೀರಚಂದ್ರನ ಮುಖದ ಚಿಂತೆಯನ್ನು ಗಮನಿಸಲಿಲ್ಲ. ಅವನ ಅಂದ ಚೆಂದಗಳನ್ನು ನೋಡಿ ಆಶ್ಚರ್ಯಪಡುತ್ತ, ಸಂತೋಷ ಕುತೂಹಲಗಳಿಂದ "ಮನುಷ್ಯನಿಗೆ ಎಂತಹ ಮೈಕಟ್ಟು! ಎಷ್ಟೊಂದು ಚೆಂದ!" ಎಂದುಕೊಂಡಳು.

ಕೌಮುದಿ ಬಹಳ ಹೊತ್ತಿನವರೆಗೆ ಅವನನ್ನೇ ನೋಡುತ್ತ ಸುಮ್ಮನೆ ನಿಂತಳು. ಆಲೋಚನೆಯಲ್ಲಿ



ಮುಳುಗಿಹೋಗಿದ್ದ ಧೀರಚಂದ್ರನು ಅವಳನ್ನು ಗಮನಿಸಲೇ ಇಲ್ಲ. ಕಡೆಗೆ ಅವಳೇ ಅವನ ಹತ್ತಿರ ಬಂದು ಮಾತು ತೆಗೆದಳು.

"ಯಾರು ನೀನು ?" ಎಂದು ಅವಳು ಕೇಳಲು, ಧೀರಚಂದ್ರನು ಬೆದರಿಬಿದ್ದು ಅವಳ ಹೊಸ ಬಗೆಯ ಚೆಲುವನ್ನು ಕಣ್ಣುಬಿಟ್ಟು ನೋಡುತ್ತ, "ನೀನು ಯಾರು ?" ಎಂದು ಕೇಳಿದನು.

"ನನ್ನ ಹೆಸರು ಕೌಮುದಿ. ನಾನು ಮಾನವಿಯಲ್ಲ. ನಾಗಕನ್ಯೆ" ಎಂದು ಹೇಳಿ ಧೀರಚಂದ್ರನ ಮುಖವನ್ನು ಪರೀಕ್ಷಿಸಿ ನೋಡಿ, "ನೀನು ಹರ್ಷವಿಲ್ಲದೆ ಹೀಗೆ ಚಿಂತೆಯಲ್ಲಿರುವಿ ಏಕೆ ?" ಎಂದು ಪ್ರಶ್ನಿಸಿದಳು.

ಧೀರಚಂದ್ರನು ಅವಳೊಂದಿಗೆ ತನ್ನ ಕಷ್ಟಗಳನ್ನೆಲ್ಲಾ ಹೇಳಿದನು. ಅದನ್ನು ಕೇಳಿ ನಾಗಕನ್ಯೆ "ನಾನು ನಿನ್ನನ್ನು ಪ್ರೇಮಿಸುತ್ತೇನೆ. ನಿನಗೆ ಸಂತೋಷ ಬರಿಸುತ್ತೇನೆ. ನನ್ನ ಜತೆಯಲ್ಲಿ ನಾಗಲೋಕಕ್ಕೆ ಬರುವಿಯಾ ?" ಎಂದು ಕೇಳಿದಳು.

ನಾಗಕನ್ಯೆಯ ಮಾತಿಗೆ ಧೀರಚಂದ್ರನು ಆಶ್ಚರ್ಯಪಡುತ್ತ ಒಂದು ಕ್ಷಣ ತಡೆದು, "ನನಗೆ ಬಂದ ಕಷ್ಟಗಳನ್ನೆಲ್ಲಾ ಹೇಳಿದೆನಷ್ಟೆ? ಆದ್ದರಿಂದ ನಾನು ಎಲ್ಲಿಗೂ ಬರಲಾರೆನು" ಎಂದನು.

"ಹೂಂ. ನಿನ್ನ ಕಷ್ಟಗಳ ಸಮಸ್ಯೆ ಹಣದೊಂದಿಗೆ ಗಂಟುಬಿದ್ದಿರುವಂತಹುದು. ನಾನು ನಿನಗೆ ಬೇಕಾದಷ್ಟು ಬಂಗಾರ ತಂದುಕೊಡುತ್ತೇನೆ. ಇಲ್ಲಿಯೇ ಇರು" ಎಂದವಳೇ ನಾಗಕನ್ಯೆಯು ಮಾಯವಾಗಿ ಹೋದಳು.

ಈಗ ನಡೆದುದು ಸ್ವಪ್ನವೋ ನಿಜವೋ ಎಂದು ಧೀರಚಂದ್ರನು ಆಲೋಚಿಸತೊಡಗಿದನು. ಆದರೆ ಕೆಲವೇ ಕ್ಷಣಗಳಲ್ಲಿ ನಾಗಕನ್ಯೆ ಅವನ ಮುಂದೆ ಪ್ರತ್ಯಕ್ಷಳಾಗಿ ಒಂದು ಮೂಟೆಯನ್ನು ಅವನ ಮುಂದಿಟ್ಟಳು. ಅದರಲ್ಲಿ ಬಂಗಾರದ ನಾಣ್ಯಗಳೂ, ಬೆಲೆ ಬಾಳುವಂತಹ ವಜ್ರಗಳೂ, ಮೊದಲಾದ ಮಣಿ ಮಾಣಿಕ್ಯಗಳೂ ಇದ್ದುವು.

"ಈ ಹಣದಿಂದ ನಿನ್ನ ಸಾಲದ ಕಾಟವನ್ನೆಲ್ಲಾ ತೀರಿಸಿ, ಮತ್ತೇನಾದರೂ ಬಾಧ್ಯತೆಗಳಿದ್ದರೆ ಅದನ್ನೂ ನೆರವೇರಿಸಿ, ಬರುವ ದಶಮಿಯ ದಿನ ಇಲ್ಲಿಗೆ ಬಾ. ಬಾರದೆ ತಪ್ಪಿಸಿದರೆ ನಿನ್ನ ಕುಟುಂಬವನ್ನು ಸರ್ವನಾಶನ ಮಾಡಿಬಿಡುತ್ತೇನೆ" ಎಂದಳು ನಾಗಕನ್ಯೆ.

ಆ ದಿನದಿಂದ ಧೀರಚಂದ್ರನ ಜಾತಕವು ಬದಲಾಗಿ ಹೋಯಿತು. ನಾಗಕನ್ಯೆ ಕೊಟ್ಟ ಮೂಟೆಯಲ್ಲಿರುವ ಒಂದು ಮಣಿಯನ್ನು ಮಾರಿ, ಲಕ್ಷ ವರಹಗಳನ್ನು ಪಡೆದನು. ಅದರಿಂದ ಅವನು ಸಾಲ ಪೂರಾ ತೀರಿಸಿ, ಸುಂದರವಾದೊಂದು ಭವನವನ್ನೂ ಕೊಂಡುಕೊಂಡನು. ಮನೆಯಲ್ಲಿ ದಾಸದಾಸಿಯರನ್ನೂ ಏರ್ಪಡಿಸಿದನು. ತಾಯಿಗೆ ಒಳ್ಳೆಯ ವೈದ್ಯನಿಂದ ಚಿಕಿತ್ಸೆ ಮಾಡಿಸಿದನು. ಅವಳು ಆರೋಗ್ಯವಂತಳಾಗುತ್ತಾ ಬಂದಳು.



ಎರಡೇ, ದಿನಗಳಲ್ಲಿ ಅವಳು ಎದ್ದು ನಡೆದಾಡ ತೊಡಗಿದಳು. ತಮ್ಮ ಹೊಸ ಮನೆಯನ್ನೂ, ತನಗೆ ಸೇವೆ ಮಾಡುವ ದಾಸದಾಸಿಯರನ್ನೂ ನೋಡಿ ಅವಳು ಆಶ್ಚರ್ಯಪಟ್ಟು ಧೀರಚಂದ್ರನೊಂದಿಗೆ, "ಅಪ್ಪಾ ಮಗನೇ, ನಮ್ಮ ಪರಿಸ್ಥಿತಿಯಲ್ಲಿ ಇಷ್ಟೊಂದು ಬದಲಾವಣೆ ಹೇಗೆ ಬಂತಪ್ಪಾ ?" ಎಂದು ಕೇಳಿದಳು.

ಧೀರಚಂದ್ರನು ಏನೂ ಮುಚ್ಚುಮರೆ ಮಾಡದೆ ಎಲ್ಲಾ ಸಂಗತಿಯನ್ನು ತಾಯಿಯೊಂದಿಗೆ ಹೇಳಿದನು.

ಅದನ್ನೆಲ್ಲ ಕೇಳಿ ಅವಳು ಹೆದರಿ, "ಅಂತಹ ನಾಗಕನ್ನೆಯೊಂದಿಗೆ ಸಂಬಂಧವು ಬಹಳ ಅಪಾಯವಪ್ಪಾ. ನೀನು ಹೇಗೋ ಉಪಾಯಮಾಡಿ ಆ ನಾಗಕನ್ನೆಯ ಸಂಬಂಧದಿಂದ ಮುಕ್ತನಾಗಲೇಬೇಕು. ನನ್ನ ತಮ್ಮ ಶೂರಗುಪ್ತನು ನಿನಗೇನಾದರೂ ಸಹಾಯ ಮಾಡುವನು. ಹೋಗಿ ಅವನ ಆಲೋಚನೆಯನ್ನು ಕೇಳು" ಎಂದಳು.

ಧೀರಚಂದ್ರನ ತಾಯಿ ಶೂರಗುಪ್ತನ ಹೆಸರು ಹೇಳಲಿಕ್ಕೆ ಒಂದು ಕಾರಣವಿದ್ದಿತು. ಇವರು ಕಷ್ಟ ಕಾಲದಲ್ಲಿರುವಾಗ ಶೂರಗುಪ್ತನು ಇವರ ಮನೆಯ ನೆರಳಿಗೆ ಸಹಾ ಬರಲಿಲ್ಲ. ಅವನೊಬ್ಬ ಪರಮ ಸ್ವಾರ್ಥ ಗುಣವುಳ್ಳವನು. ಆದರೆ ಅವನಿಗೆ ಧೀರ ಚಂದ್ರನಿಗೆ ತಕ್ಕ ಜೋಡಿಯಾಗುವ ಮಗಳಿದ್ದಳು. ಈಗ ಧೀರಚಂದ್ರನ ಪರಿಸ್ಥಿತಿ ಚೆನ್ನಾದುದರಿಂದ ಅವನು ತಪ್ಪದೆ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಬೇಕೆಂದು ಭಾವಿಸುತ್ತಾನೆ. ಇಂತಹ ಸಂದರ್ಭ ಬಂದಾಗ ಸ್ವಾರ್ಥಪರರು ಸಹಾಯಕ್ಕೆ ಬರುವ ಹಾಗೆ ಬೇರೆ ಯಾರೂ ಬಾರರು.

ಧೀರಚಂದ್ರನು ತಾಯಿಯ ಮಾತಿನಂತೆಯೇ ನಡೆದನು. ಅವನ ತಾಯಿ ಅಂದುಕೊಂಡ ಹಾಗೆಯೇ ನಡೆಯಿತು. ತನ್ನ ಸೋದರಳಿಯನಾದ ಧೀರಚಂದ್ರನು ತನಗಿಂತಲೂ ಹೆಚ್ಚಿನ ಭಾಗ್ಯವಂತನಾದುದನ್ನು ನೋಡಿ, ಶೂರಗುಪ್ತನು ಅವನನ್ನು ಬಹು ಚೆನ್ನಾಗಿ ಆದರಿಸಿದನು. ಅವನ ಸಮಾಚಾರವನ್ನು ಕೇಳಿ, "ಆ ನಾಗಕನ್ಯೆ ಕೌಮುದಿಯನ್ನು ಬಿಡಿಸಿಕೊಳ್ಳಲು ಒಂದು ಉಪಾಯ ಹೇಳುತ್ತೇನೆ. ನಿನ್ನ ತಾಯಿಯ ರೋಗ ಗುಣವಾಗುವುದಿಲ್ಲವೆಂದೂ, ಅದಕ್ಕೆ ಪಾತಾಳದ ನಾಗಮೂಲಿಕೆ ಬೇಕೆಂದೂ ಅವಳ ಹತ್ತಿರ ಹೇಳು. ಅಂತಹ ಮೂಲಿಕೆ ತರಲು ಕೌಮುದಿಯಿಂದ ಸಾಧ್ಯವಾಗದು" ಎಂದು ಉಪಾಯ ಹೇಳಿದನು.

ದಶಮಿಯ ದಿನ ಧೀರಚಂದ್ರನು ನಾಗಕನ್ಯೆಯನ್ನು ನೋಡಲು ನದಿಯ ಬದಿಗೆ ಹೋದನು. ಅವನನ್ನು ನಿರೀಕ್ಷಿಸಿಕೊಂಡಿದ್ದ ಅವಳೊಂದಿಗೆ ಶೂರಗುಪ್ತನು ಹೇಳಿದ ಹಾಗೆಯೇ ಹೇಳಿದನು.

ಕೂಡಲೇ ಕೌಮುದಿ, "ನನ್ನ ಆಯುಷ್ಯವು ಸಾವಿರ ವರ್ಷಗಳು. ನಿನಗೆ ನಾಗಮೂಲಿಕೆಯನ್ನು ತಂದುಕೊಟ್ಟರೆ ನನ್ನ ಆಯುಷ್ಯ ಅರ್ಧಕ್ಕರ್ಧ ತಗ್ಗಿ ಹೋಗುತ್ತದೆ. ಪರವಾಗಿಲ್ಲ. ನನ್ನ ಆಯುಷ್ಯ

ತಗ್ಗಿದರೂ ಚಿಂತೆಯಿಲ್ಲ. ಅದನ್ನು ತಂದುಕೊಡುತ್ತೇನೆ. ಆದರಿಂದ ನರರಿಗೆ ಸಂಬಂಧಿಸಿದ ಯಾವ ರೋಗವಾದರೂ ಗುಣವಾಗಿಬಿಡುತ್ತದೆ" ಎಂದಳು.

ಹೇಳಿದ ಹಾಗೆಯೇ ಅವಳು ಹೋಗಿ ನಾಗ ಮೂಲಿಕೆ ತಂದು ಧೀರಚಂದ್ರನಿಗೆ ಕೊಟ್ಟಳು. ಇದರಿಂದ ತಾಯಿಯ ರೋಗವನ್ನು ಗುಣಪಡಿಸಿ, ಬರುವ ಹುಣ್ಣಿಮೆಯ ದಿನ ನಾಗಲೋಕ ಪ್ರಯಾಣಕ್ಕೆ ತಯಾರಾಗಿ ಬರುವಂತೆ ಹೇಳಿ ಹೋಗಿಬಿಟ್ಟಳು ಕೌಮುದಿ.

ಆ ನಾಗಮೂಲಿಕೆಯಿಂದ ಧೀರಚಂದ್ರನ ತಾಯಿಯ ರೋಗ ಕ್ಷಣಮಾತ್ರದಲ್ಲಿ ಪೂರ್ತಿ ಗುಣವಾಯಿತು. ಆದರೆ ಅದಕ್ಕಾಗಿ ಅವಳು ಸಂತೋಷ ಪಡಲಿಲ್ಲ. ವಿಚಾರ ಭಾರದಿಂದ ಶೂರಗುಪ್ತನಿಗೆ ವಾರ್ತೆ ಕಳುಹಿಸಿದಳು.

ಶೂರಗುಪ್ತನು ಬಂದು, ನಡೆದುದೆಲ್ಲವನ್ನೂ ತಿಳಿದು ಧೀರಚಂದ್ರನೊಂದಿಗೆ, "ನಿನ್ನ ತಾಯಿಯನ್ನು ಒಂಟಿಯಾಗಿ ಇಲ್ಲಿ ಬಿಟ್ಟು ನೀನು ಕೌಮುದಿಯೊಂದಿಗೆ ಹೇಗೆ ಹೋಗುವಿ ? ಎಲ್ಲಿಗೋ ಹೊರಟು ಹೋಗಿದ್ದ ನಿನ್ನ ತಂದೆ ಮತ್ತೆ ಬರುವವರೆಗೂ ನಾಗ ಲೋಕಕ್ಕೆ ಬರಲಾರೆನೆಂದು ಅವಳೊಂದಿಗೆ ಹೇಳಿ ಬಿಡು" ಎಂದು ಉಪಾಯ ಹೇಳಿದನು.

ಹುಣ್ಣಿಮೆಯ ದಿನ ಧೀರಚಂದ್ರನು ನಾಗ ಕನ್ಯೆಯನ್ನು ನೋಡಿ, ಶೂರಗುಪ್ತನು ಹೇಳಿದಂತೆ ಹೇಳಿದನು. ಅದನ್ನು ಕೇಳಿ ನಾಗಕನ್ಯೆ ಚಿಂತಿಸುತ್ತ, "ನಿನ್ನ ತಂದೆ ಎಲ್ಲಿರುವರೆಂದು ಕಂಡುಹಿಡಿದು ಕರೆದುಕೊಂಡು ಬರುವುದಕ್ಕೆ ನನ್ನ ಆಯುಷ್ಯದಲ್ಲಿ ನೂರು ವರ್ಷಗಳನ್ನು ಬಿಡಬೇಕಾಗುತ್ತದೆ. ಆದರೂ ನಿನಗಾಗಿ ಆ ಕೆಲಸ ಮಾಡುತ್ತೇನೆ" ಎಂದಳು.

ಈಸಾರಿ ಅವಳು ಬರಲಿರುವ ಪಂಚಮಿಯ ದಿನ ಧೀರಚಂದ್ರನು ನಾಗಲೋಕಕ್ಕೆ ಬರಬೇಕೆಂತಲೂ ಹೇಳಿದಳು.



ಅದೇ ದಿನ ರಾತ್ರಿಯಲ್ಲಿ ಧೀರಚಂದ್ರನ ತಂದೆ ಮನೆಗೆ ಬಂದುಬಿಟ್ಟನು. ತನ್ನ ಗಂಡನು ಬಂದುದನ್ನು ನೋಡಿ ಸಂತೋಷ ಪಡುವುದಕ್ಕೆ ಬದಲು, ಮಗನು ದೂರವಾಗಿ ಹೋಗುವನೆಂದು ಅವನ ತಾಯಿಗೆ ಚಿಂತೆ ಹಿಡಿದುಕೊಂಡಿತು. ಮತ್ತೆ ಶೂರಗುಪ್ತನು ಇನ್ನೊಂದು ಆಲೋಚನೆ ಹೇಳಿದನು. ಆ ಪ್ರಕಾರ ಧೀರಚಂದ್ರನು ನಾಗಲೋಕಕ್ಕೆ ಹೋಗುವುದು ಸಾಧ್ಯವಾಗಲಾರದು. ಮನುಷ್ಯರು ಏಕಪತ್ನೀ ವ್ರತರು. ಹೆಂಡತಿ ತೌರುಮನೆಯಿಂದ ಅತ್ತೆಯ ಮನೆಗೆ ಬಂದು ಸಂಸಾರ ನಡೆಸುವುದೇ ಅವರ ಆಚಾರ. ನಾಗಕನ್ಯೆ ಕೌಮುದಿ ಧೀರಚಂದ್ರನನ್ನು ಪ್ರೇಮಿಸುವವಳಾದರೆ, ಅವಳು ಅವನನ್ನು ಮದುವೆ ಮಾಡಿಕೊಂಡು ಅತ್ತೆಯ ಮನೆಯಲ್ಲಿಯೇ ಇರಬೇಕಾಗುತ್ತದೆ.

ಶೂರಗುಪ್ತನು ಈ ನಿಯಮಗಳನ್ನು ಅವಳಿಗೆ ಹೇಳುವಂತೆ ಧೀರಚಂದ್ರನೊಂದಿಗೆ ಹೇಳಿ, "ನಾಗಕನ್ಯೆ



ಮಾನವರ ಮಧ್ಯದಲ್ಲಿ ಇರಲಾರಳು. ಆದುದರಿಂದ ಅವಳು ಇದಕ್ಕೆ ಒಪ್ಪುವಂತಿಲ್ಲ. ಅಂತಲೇ ಅವಳು ಈ ನಿಯಮಗಳನ್ನು ಅಂಗೀಕರಿಸುವುದಿಲ್ಲ. ಹಾಗೇನಾದರೂ ಅವಳು ಅದಕ್ಕೆ ಒಪ್ಪಿದಳಾದರೆ ಕಡೇ ಉಪಾಯ ಪ್ರಯೋಗಿಸು!" ಎಂದು ಆ ಕಡೇ ಉಪಾಯವನ್ನೂ ಹೇಳಿದನು.

ಪಂಚಮಿಯ ದಿನ ಧೀರಚಂದ್ರನು ನದಿಯ ಬಳಿಗೆ ಹೋಗಿ ನಾಗಕನ್ಯೆಯನ್ನು ಸಂಧಿಸಿ, ಭೂಮಿಯ ಮನುಷ್ಯರ ನಿಯಮಗಳನ್ನು ಹೇಳಿದನು.

"ನಾನು ನಿನ್ನನ್ನು ಮದುವೆ ಮಾಡಿಕೊಂಡು ನಿನ್ನ ಮನೆಗೆ ಬಂದುಬಿಟ್ಟರೆ, ಮತ್ತೆ ನನಗೆ ನಾಗಲೋಕದ ಸಂಬಂಧವೇ ಇರುವುದಿಲ್ಲ. ಆದುದರಿಂದ ನಿನ್ನನ್ನು ಸ್ವಲ್ಪ ಕಾಲ ಮಾತ್ರ ನಮ್ಮ ಲೋಕಕ್ಕೆ ಕರೆದುಕೊಂಡು ಹೋಗೋಣವೆಂದಿದ್ದೇನೆ" ಎಂದಳು ನಾಗಕನ್ಯೆ ಚಿಂತೆಯಿಂದ. ಅದನ್ನು ಕೇಳಿ ಧೀರಚಂದ್ರನು ಅಪ್ರತಿಭನಾಗಿ, "ಅದು ನಮ್ಮ ಮಾನವ ಸಂಪ್ರದಾಯಕ್ಕೆ ಸರಿಯಾಗುವುದಿಲ್ಲ, ದಯಮಾಡಿ ನನ್ನನ್ನು ಕ್ಷಮಿಸು" ಎಂದನು ಧೀರಚಂದ್ರ.

"ನಾನು ಮನಸ್ಸು ಮಾಡಿದರೆ ನಿನ್ನನ್ನು ಬಲವಂತದಿಂದ ಎತ್ತಿಕೊಂಡು ಹೋಗಬಲ್ಲೆನು. ಸರಿ, ನಿನಗಾಗಿ ನನ್ನ ಸರ್ವಶಕ್ತಿಗಳನ್ನೂ, ಮಹಿಮೆಗಳನ್ನೂ ಕಳೆದುಕೊಳ್ಳಲು ಸಿದ್ಧಳಾಗುತ್ತೇನೆ. ನಿನ್ನ ಇಷ್ಟ ಪ್ರಕಾರವೇ ಆಗಲಿ!" ಎಂದಳು ನಾಗಕನ್ಯೆ.

ಅವಳ ಅಂಗೀಕಾರವನ್ನು ಕೇಳಿ ಧೀರಚಂದ್ರನು ಬೆಪ್ಪು ಬಡಿದವನ ಹಾಗಾಗಿ, ಕಡೇ ಉಪಾಯವನ್ನು ನೆನೆದು, "ಮಹಿಮೆಗಳನ್ನು ಕಳೆದುಕೊಂಡರೆ ನಾನು ನಿನ್ನನ್ನು ಪೀಡಿಸುವೆನೆಂಬ ಭಯವು ನಿನಗಿಲ್ಲವೆ?" ಎಂದು ಕೇಳಿದನು.

"ನಾನು ನಿನ್ನನ್ನು ಪೂರ್ಣವಾಗಿ ಪ್ರೇಮಿಸುವಾಗ ನೀನು ನನ್ನನ್ನು ಪೀಡಿಸಲು ಕಾರಣವೇನಿರುತ್ತದೆ?" ಎಂದಳು ಕೌಮುದಿ.

"ಅದಕ್ಕೆ ಕಾರಣವಿದೆ. ನನ್ನ ತಂದೆ ಗರುಡ ವಂಶಕ್ಕೆ ಸೇರಿದವರು. ನನ್ನ ತಾಯಿಗಾಗಿ ಅವರು ತನ್ನ ಲೋಕವನ್ನು ಬಿಟ್ಟು ಭೂಲೋಕಕ್ಕೆ ಬಂದು ಸ್ಥಿರಪಟ್ಟವರು. ನನ್ನಲ್ಲಿಯೂ ಅವರ ಅಂಶವು ಇದೆಯಷ್ಟೆ?" ಎಂದನು ಧೀರಚಂದ್ರ.

ಅದನ್ನು ಕೇಳಿ ಕೌಮುದಿ, "ಗರುಡರಿಗೂ ನಾಗರಿಗೂ ಜಾತಿ ವೈರವಿರುವುದು ನಿಜವೇ, ಆದರೆ ನಾನು ನಿನ್ನನ್ನು ಪ್ರಾಣಾಧಿಕವಾಗಿ ಪ್ರೇಮಿಸುತ್ತಿದ್ದೇನೆ. ನಿನ್ನ ಹೆಂಡತಿಯಾಗಿರಲು ನನ್ನ ಪ್ರಾಣ ಕೊಡಾ ಲೆಕ್ಕಿಸಲಾರೆನು" ಎಂದಳು.

ಧೀರಚಂದ್ರನು ಅವಳ ಉತ್ತರವನ್ನು ಕೇಳಿ, ಪುಲಕಿತನಾಗಿ, "ನಾನು ನಿನ್ನೊಂದಿಗೆ ನಾಗಲೋಕಕ್ಕೇ ಬರುತ್ತೇನೆ. ನಾವು ಅಲ್ಲಿಯೇ ಸುಖವಾಗಿರೋಣ" ಎಂದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ತನ್ನ ಸ್ವಂತ ಪ್ರಯೋಜನಕ್ಕಾಗಿ ಧೀರಚಂದ್ರನು

ನಾಗಕನ್ಯೆ ಕೌಮುದಿಗೆ ಬಹಳ ನಿಯಮಗಳನ್ನು ಇಟ್ಟನು. ಅವುಗಳನ್ನೆಲ್ಲಾ ನಾಗಕನ್ಯೆ ನೆರವೇರಿಸಿಕೊಂಡು ಒಂದಿದ್ದಾಳೆ. ಹಾಗಿರುವಾಗ ಅವನು ಅವಳನ್ನು ಮನೆಗೆ ಕರೆದುಕೊಂಡು ಹೋಗಿ ವಿವಾಹ ಮಾಡಿಕೊಳ್ಳಬೇಕಾಗಿತ್ತು. ಹಾಗೆ ಮಾಡದೆ ನಾಗಕನ್ಯೆಯ ಜತೆಯಲ್ಲಿ ನಾಗಲೋಕಕ್ಕೇ ಹೊರಟು ಹೋಗಲು ತಯಾರಾದನು. ತೀರಾ ಕಾರ್ಯಸಿದ್ಧಿಯಾದಾಗ ಅವನು ಆ ರೀತಿಯಲ್ಲಿ ಪ್ರವರ್ತಿಸಿಕೊಳ್ಳುವುದು ನೀತಿಗೇಡಿತನ ಹೌದೋ ಅಲ್ಲವೋ ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆಯುವುದು ಖಂಡಿತ " ಎಂದು ಹೇಳಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : " ಧೀರಚಂದ್ರನು ಹೇಳಿದ ನಿಯಮಗಳೆಲ್ಲವನ್ನೂ ಸ್ವಾರ್ಥ ಬುದ್ಧಿಯಿಂದ ಕಲ್ಪಿಸಿ ಹೇಳಿಕೊಟ್ಟವನು ಅವನ ಸೋದರಮಾವನಾದ ಶೂರಗುಪ್ತ. ಅವುಗಳಿಗೆಲ್ಲಾ ನಾಗಕನ್ಯೆ ಒಪ್ಪಿಕೊಂಡ ಮೇಲೆ ಧೀರಚಂದ್ರನಿಗೆ ಲೋಕದ ರೀತಿ ಚೆನ್ನಾಗಿ ಅರ್ಥವಾಯಿತು. ತಂದೆ ತಾಯಿಗಳಿಗೂ, ಸೋದರಮಾವನಿಗೂ, ಎಲ್ಲರಿಗೂ ಸಹ ಹಣವೇ ಮುಖ್ಯ ಗುರಿ. ಹಣದ ಅಭಾವದಿಂದ ಅವನ ತಂದೆ, ತಾಯಿಯನ್ನು ಬಿಟ್ಟು ಓಡಿ ಹೋದನು. ಧೀರಚಂದ್ರನ ಹತ್ತಿರ ಹಣವು ಸೇರುತ್ತಲೇ ಎಷ್ಟೋ ಕಾಲದಿಂದ ಸಂಬಂಧವಿಲ್ಲದವನಂತಿದ್ದ ಸೋದರಮಾವನು ಅವನ ಶ್ರೇಯೋಭಿಲಾಷಿಯಾಗಿ ಬಂದನು. ನಾಗಕನ್ಯೆ ಅವರಿಗೆ ಹಣ ಕೊಟ್ಟುದಷ್ಟೇ ಅಲ್ಲದೆ, ತನ್ನ ಆಯುಷ್ಯವನ್ನು ಕೂಡಾ ಧಾರೆಯೆರೆದಳು. ಆದರೂ ಅವರು ಕೃತಜ್ಞತೆ ತೋರಿಸುವುದಕ್ಕೆ ಬದಲಾಗಿ ಸ್ವಾರ್ಥದಿಂದ ಅವಳನ್ನು ಮೋಸಪಡಿಸಲಿಕ್ಕೇ ನೋಡಿದರು. ತನ್ನನ್ನು ವಿವಾಹ ಮಾಡಿಕೊಂಡು ಭೂಲೋಕದಲ್ಲಿದ್ದರೆ ಎಷ್ಟೋ ಕಷ್ಟಗಳು ಬರುತ್ತವೆಂದು ಭಯಪಡಿಸಿದರೂ ನಾಗಕನ್ಯೆ ಕೌಮುದಿ ಅದಕ್ಕೆ ಸಿದ್ಧಳಾಗಿ ಧೀರಚಂದ್ರನನ್ನು ವಿವಾಹವಾಗಲು ಒಪ್ಪಿರುವಳು. ಇದನ್ನು ನೋಡಿದ ಮೇಲೆ ಅವನಿಗೆ ನಾಗಕನ್ಯೆ ತನ್ನನ್ನು ಎಷ್ಟೊಂದು ಪ್ರೇಮಿಸುವಳೆಂಬುದು ಅವಗಾಹನೆಯಾಯಿತು. ತನ್ನ ಬಂಧು ಬಳಗದವರೆಲ್ಲ ಎಷ್ಟು ನೀಚ ಬುದ್ಧಿಯವರೆಂಬುದೂ ಅರ್ಥವಾಯಿತು. ಈ ಕಾರಣಗಳಿಂದಲೇ ಅವನು ಎಲ್ಲರನ್ನೂ ತೊರೆದು ಅವಳೊಂದಿಗೆ ಹೋಗಲು ಸಿದ್ಧನಾದನು. ಇದರಲ್ಲಿ ಅವನ ನೀತಿ ಬಾಹಿರತೆ ಏನೂ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಮಾಯವಾಗಿ ಹೋಗಿ ಮರದ ಕೊಂಬೆ ಹಿಡಿದು ನೇತಾಡತೊಡಗಿತು.



# ರೋಗ ನಿರ್ಣಯ

ವೈದ್ಯನೆಂದು ಹೆಸರಾಂತ ಕೃಪಾನಂದನು ತನ್ನ ಬಳಿಗೆ ಬಂದ ರೋಗಿಗಳ ನಾಡೀ ಪರೀಕ್ಷೆ ಮುಂತಾದುವನ್ನು ಮಾಡಿ, "ಇದು ಬಹಳ ಮುಖ್ಯ. ಕಳೆದ ನಾಲ್ಕು ದಿನಗಳಿಂದ ನೀವು ಯಾವ ಯಾವ ತರಕಾರಿಗಳನ್ನು ತಿಂದಿರೆಂದು ನೆನಪುಮಾಡಿ ಹೇಳಿರಿ. ಅದರಲ್ಲೊಂದು ತರಕಾರಿಯೇ ನಿಮ್ಮ ಅನಾರೋಗ್ಯಕ್ಕೆ ಕಾರಣವಾಗಿರಬೇಕು" ಎನ್ನುತ್ತಿದ್ದನು.

ಆಮೇಲೆ ರೋಗಿ ಹೇಳಿದ ತರಕಾರಿಗಳ ಹೆಸರು ಜಾಗರೂಕತೆಯಿಂದ ಕೇಳಿ, "ಓಹೋ ! ಹಾಗನ್ನಿ. ರೋಗದ ಗುಟ್ಟು ತಿಳಿಯಿತು ! ಈ ಔಷಧ ಕೊಡುತ್ತೇನೆ. ತೆಗೆದುಕೊಳ್ಳಿ !" ಎಂದು ಔಷಧ ಕೊಟ್ಟು ಹಣ ತೆಗೆದುಕೊಳ್ಳುವನು.

ಅವನ ಹತ್ತಿರ ವೈದ್ಯಕೀಯ ಕಲಿಯಲು ಬಂದ ರತ್ನಾಚಾರಿ ಎಂಬ ಯುವಕನು, ತನ್ನ ಗುರುವಿನ ಚಿಕಿತ್ಸೆಯ ರೀತಿಯನ್ನು ಕೆಲವು ದಿನ ಗಮನಿಸಿ, ಒಂದು ದಿನ "ಗುರುದೇವಾ, ಬಂದ ರೋಗಿಗಳ ಹತ್ತಿರ ಹಿಂದೆ ನಾಲ್ಕು ದಿನಗಳಲ್ಲಿ ತಿಂದ ತರಕಾರಿಗಳ ಸಂಗತಿ ಕೇಳುವಿರಿ. ರೋಗ ನಿರ್ಣಯದಲ್ಲಿ ಅದು ಅಷ್ಟು ಮುಖ್ಯವೇ?" ಎಂದು ಕೇಳಿದನು.

ಆ ಪ್ರಶ್ನೆಗೆ ಕೃಪಾನಂದನು ನಕ್ಕು, "ಅವರು ಅಡಿಗೆ ಮಾಡಿದ ತರಕಾರಿಗಳು ಅವರ ಆರ್ಥಿಕ ಪರಿಸ್ಥಿತಿಯನ್ನು ತಿಳಿಸುವಂಥವು ತಾನೇ ? ಅದನ್ನು ನೋಡಿ ಅವರಿಂದ ಎಷ್ಟು ಹಣ ವಸೂಲು ಮಾಡಬಹುದೆಂಬುದನ್ನು ನಿರ್ಣಯಿಸುತ್ತೇನೆ" ಎಂದನು.






ನಮ್ಮ ದೇವಾಲಯಗಳು:

# ಕಾಳೀಘಟ್

ಬಹಳ ಕಾಲದ ಹಿಂದೆ ಆತ್ಮಾರಾಮನೆಂಬ ಬ್ರಾಹ್ಮಣನು ದಿನಾ ಅರಣ್ಯದ ಸಮೀಪದಲ್ಲಿರುವ ಗಂಗಾ ತೀರಕ್ಕೆ ಹೋಗಿ ಸ್ವಲ್ಪ ಹೊತ್ತು ಭಗವದ್ಧ್ಯಾನದಲ್ಲಿ ಕಳೆಯುವನು. ಅವನ ನಿವಾಸವು ಅರಣ್ಯದ ಪಕ್ಕದಲ್ಲಿರುವ ಒಂದು ಗ್ರಾಮ.

ಒಂದು ದಿನ ಸಾಯಂಕಾಲ ಆತ್ಮಾರಾಮನು ಧ್ಯಾನವನ್ನು ಮುಗಿಸಿ ಎದ್ದ ಕೂಡಲೇ ಗಂಗಾ ಪ್ರವಾಹದಿಂದ ಒಂದು ಬೆಳಕಿನ ರೇಖೆ ಮೇಲೆದ್ದು ಬರುವುದು ಕಂಡಿತು. ಅವನಿಗೆ ಬಹಳ ಆಶ್ಚರ್ಯವಾಯಿತು. ಕತ್ತಲೂ ಕವಿದು ಕೊಂಡು ಬರುವುದರಿಂದ ಅವನಿಗೆ ಆ ಸ್ಥಳಕ್ಕೆ ಹೋಗಲಾಗಲಿಲ್ಲ.





ಆ ದಿನ ರಾತ್ರಿಯಿಡೀ ಆತ್ಮಾರಾಮನಿಗೆ ನಿದ್ದೆ ಬರಲಿಲ್ಲ. ಸಾಯಂಕಾಲದಲ್ಲಿ ನೋಡಿದ ಬೆಳಕಿನ ರೇಖೆಯನ್ನು ಕುರಿತೇ ಆಲೋಚಿಸುತ್ತಿದ್ದನು. ಮರುದಿನ ಬೆಳಂಜಾಮದಲ್ಲೇ ಎದ್ದು ಗಂಗಾ ತೀರಕ್ಕೆ ಹೋದನು. ನಿನ್ನೆ ನೋಡಿದ ಪ್ರಕಾಶವು ಇನ್ನೂ ಹಾಗೆಯೇ ಇದ್ದಿತು. ಅವನು ಅದರ ಹತ್ತಿರ ಹೋಗಿ ನೋಡಿದನು. ನೀರಿನಲ್ಲಿ ಥಳಥಳಿಸುವ ಒಂದು ಶಿಲಾ ಹಸ್ತವು ಅವನಿಗೆ ಕಂಡಿತು.




ಆತ್ಮಾರಾಮನು ಅದನ್ನು ಎತ್ತಿಕೊಂಡು ಮನೆಗೆ ಹಿಂದಿರುಗಿದನು. ಆ ದಿನ ರಾತ್ರಿ ಅವನಿಗೆ ಅದ್ಭುತವಾದ ಸ್ವಪ್ನ ಬಿದ್ದಿತು. ಯಜ್ಞಕ್ಕೆ ಬಂದ ಸತೀದೇವಿಯನ್ನು ನೋಡಿದ ಕೂಡಲೇ ದಕ್ಷನು ಕೋಪಾತಿರೇಕದಿಂದ ಶಿವನನ್ನು ನಾನಾ ದುರ್ಭಾಷೆಗಳಿಂದ ಬಯ್ಯಲು, ಸತೀದೇವಿ ಸಹಿಸದೆ ಯಜ್ಞಕುಂಡದ ಸಮೀಪದಲ್ಲಿ ಸ್ಮೃತಿ ತಪ್ಪಿ ಬಿದ್ದಳು.

ಸತ್ತುಬಿದ್ದ ಸತೀದೇವಿಯ ದೇಹವನ್ನು ಶಿವನು ಭುಜದಲ್ಲೆತ್ತಿಕೊಂಡು ಮಹಾ ಬಾಧೆಯಿಂದ ಸರ್ವವನ್ನೂ ತ್ಯಜಿಸಿ, ಭೂಲೋಕದೊಳಗೆ ಎಲ್ಲೆಲ್ಲೋ ತಿರುಗ ತೊಡಗಿದನು. ಅವನನ್ನು ತಡೆಯಲು ಯಾರಿಗೂ ಸಾಧ್ಯವಾಗಲಿಲ್ಲ.





ಕೊನೆಗೆ ವಿಷ್ಣು ತನ್ನ ಸುದರ್ಶನ ಚಕ್ರವನು ಪ್ರಯೋಗಿಸಿದನು. ವಿಷ್ಣುಚಕ್ರವು ಸತೀದೇವಿಯ ದೇಹವನ್ನು ತುಂಡು ತುಂಡು ಮಾಡಿತು. ಅವಳ ಒಂದೊಂದು ಅಂಗವು ಒಂದೊಂದು ಪ್ರಾಂತದಲ್ಲಿ ಬಿದ್ದಿತು. ಅವಳ ಒಂದು ಕೈ ಈ ಅರಣ್ಯ ಪ್ರಾಂತದ ಗಂಗಾ ನದಿಯಲ್ಲಿ ಬಿದ್ದಿತ್ತು.

ತನಗೆ ಸಿಕ್ಕಿದ ಶಿಲಾ ಹಸ್ತವು ಆ ಸತೀದೇವಿಯ ದೆಂದು ಆತ್ಮಾರಾಮನಿಗೆ ಗೊತ್ತಾಯಿತು. ಅವನು ಅದನ್ನು ಕಾಳೀಮಾತೆಯ ವಿಗ್ರಹದಲ್ಲಿ ಪ್ರತಿಷ್ಠೆಮಾಡಿ, ಅರಣ್ಯದಲ್ಲಿಯೇ ಒಂದು ಕುಟೀರ ನಿರ್ಮಿಸಿ ಪೂಜಿಸಲು ತೊಡಗಿದನು.





ದೇವಿಯ ಕುಟೀರವು ಅರಣ್ಯ ಮಧ್ಯದಲ್ಲಿರುವು ದರಿಂದ ಬಹಳ ಕಾಲದವರೆಗೆ ಅದರ ಸಂಗತಿ ಯಾರಿಗೂ ತಿಳಿಯಲಿಲ್ಲ. ಒಂದು ದಿನ ಒಬ್ಬ ಜಮೀನ್ದಾರನು ಗಂಗಾ ನದಿಯಲ್ಲಿ ದೋಣಿ ಯಲ್ಲಿ ಪ್ರಯಾಣಮಾಡುತ್ತ, ಅರಣ್ಯ ಮಧ್ಯ ದಿಂದ ಶಂಖನಾದ ಹೊರಡುವುದನ್ನು ಕೇಳಿದನು.

ಜಮೀನ್ದಾರನು ದೋಣಿಯಿಂದಿಳಿದು ಅರಣ್ಯ ದೊಳಗೆ ಹೋದನು. ಕಾಳೀ ವಿಗ್ರಹದ ಮುಂದೆ ಕೆಲವು ಮುನಿಗಳು ಕುಳಿತುಕೊಂಡಿರುವುದನ್ನು ನೋಡಿ. ಅವನು ಬಹಳ ಆಶ್ಚರ್ಯಪಡುತ್ತ, ಕಾಳೀದೇವಿಯ ವಿಗ್ರಹಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದನು.





ಮುನಿಗಳ ಅನುಮತಿ ಪಡೆದು ಜಮೀನ್ದಾರನು ದೇವಿಗೆ ಆಲಯವನ್ನು ಕಟ್ಟಿಸಿದನು. ದಿನಾ ಅನೇಕ ಮಂದಿ ಭಕ್ತರು ಅಲ್ಲಿಗೆ ಬರತೊಡಗಿದರು. ಕಾಲಕ್ರಮದಲ್ಲಿ ಅದರ ಸುತ್ತಲೂ ಇದ್ದ ಅರಣ್ಯವು ಕಣ್ಮರೆಯಾಗಿ ಹೋಯಿತು. ಪೂಜಾರಿಗಳೂ, ವ್ಯಾಪಾರಿಗಳೂ ಆಲಯದ ಸುತ್ತಲೂ ಮನೆಗಳನ್ನು ನಿರ್ಮಿಸಿಕೊಂಡರು.

ಆಲಯ ನಿರ್ಮಾಣವು ಇನ್ನಷ್ಟು ವಿಸ್ತಾರವಾಗಲು, ಜನರು ತಂಡೋಪ ತಂಡವಾಗಿ ಅಲ್ಲಿಗೆ ಬರತೊಡಗಿದರು. ಯಾವಾಗಲೂ ಉತ್ಸವಗಳೂ, ಮೆರವಣಿಗೆಗಳೂ ನಡೆಯತೊಡಗಿದುವು. ಹದಿನೆಂಟನೆಯ ಶತಮಾನಕ್ಕೆಲ್ಲಾ ಆ ಸ್ಥಳವು ಕಾಳೀಘಟ್ ಎಂಬ ಹೆಸರಿನಿಂದ ಸುಪ್ರಸಿದ್ಧವಾಯಿತು.





ಕಾಳೀಘಟ್ ಎಂಬ ಮಾತೇ ಕಾಲಕ್ರಮದಲ್ಲಿ ಕಲಕತ್ತ ಎಂದು ಮಾರ್ಪಟ್ಟಿತೆಂದು ಹೇಳುತ್ತಾರೆ. ಈಸ್ಟಿಂಡಿಯಾ ಕಂಪೆನಿಯ ಆಗಮನದಿಂದ ಕಲಕತ್ತಾ ಇನ್ನಷ್ಟು ವೇಗವಾಗಿ ಅಭಿವೃದ್ಧಿಗೇರಿ, ಈ ದಿನಗಳಲ್ಲಿ ನಮ್ಮ ದೊಡ್ಡ ನಗರಗಳಲ್ಲಿ ಒಂದಾಗಿ ಬೆಳಗಿಕೊಂಡಿದೆ.



# ವಿಚಿತ್ರಪತ್ನಿ

**ಬಾ**ಗ್ದಾದು ನಗರದಲ್ಲಿ ನಿದೀಸುಮಾನ್ ಎಂಬ ಒಬ್ಬ ವರ್ತಕನಿದ್ದನು. ಅವನು ಅಪಾರ ಸೌಂದರ್ಯವುಳ್ಳ ಯುವತಿಯೊಬ್ಬಳನ್ನು ನೋಡಿ, ಅವಳ ಸೌಂದರ್ಯಾತಿಶಯಕ್ಕೆ ಮುಗ್ಧನಾಗಿ, ಅವಳ ಹುಟ್ಟು ಪೂರ್ವೋತ್ತರಗಳೊಂದನ್ನೂ ವಿಚಾರಿಸದೆ ಮದುವೆ ಮಾಡಿಕೊಂಡುಬಿಟ್ಟನು.

ಈ ವಿಷಯದಲ್ಲಿ ಸುಮಾನ್ ತನ್ನ ಬಂಧುಮಿತ್ರ ಮೊದಲಾದ ಹಿತಚಿಂತಕರೊಂದಿಗೂ ಆಲೋಚನೆ ಕೇಳಲಿಲ್ಲ.

ವಿವಾಹವಾದ ಮೇಲೆ ಸುಮಾನ್ ದೊಡ್ಡದೊಂದು ಮಾಳಿಗೆಯನ್ನು ಬಾಡಿಗೆಗೆ ಪಡೆದು ಹೆಂಡತಿಯೊಂದಿಗೆ ಅಲ್ಲಿ ವಾಸಿಸಲು ತೊಡಗಿದನು. ಮೊದಲು ಎರಡು ದಿನಗಳು ಸಂತೋಷವಾಗಿ ಕಳೆದುವು. ಆಮೇಲೆ ಅವನಿಗೆ ಆಶ್ಚರ್ಯವೂ ವಿಚಿತ್ರವೂ ಕಾಣುವಂತಾಯಿತು ಅವಳ ಪ್ರವರ್ತನೆ. ಅದೇನೆಂದರೆ ಹೆಂಡತಿ ಭೋಜನಕ್ಕೆ ಕುಳಿತುಕೊಂಡಿದ್ದರೂ ಏನೊಂದೂ ತಿನ್ನದಿರುವುದನ್ನು ನೋಡಿ ಸುಮಾನ್ ಆಶ್ಚರ್ಯಪಟ್ಟನು. ತಿನ್ನುವಂತೆ ಅವನು ಹೇಳಿದರೂ ಅವನ ಮಾತು ಅವಳು ಲಕ್ಷಿಸಲಿಲ್ಲ. ತಿನ್ನದಿರುವ ಕಾರಣ ಹೇಳಲೂ ಇಲ್ಲ. ಅವಳಿಗೇಕೆ ಹಸಿವೆಯಾಗುವುದಿಲ್ಲ ? ಇದೊಂದು ದೊಡ್ಡ ವಿಚಿತ್ರದ ಪ್ರಶ್ನೆ!

ಹೀಗೆ ಹತ್ತು ದಿನಗಳು ಕಳೆದುವು. ಒಂದು ಹೊತ್ತಾದರೂ ಹೆಂಡತಿ ಊಟ ಮಾಡಿದುದನ್ನು ಅವನು ನೋಡಲಿಲ್ಲ. ಆದರೂ ಅವಳಲ್ಲಿ ಸ್ವಲ್ಪವೂ ಬಲಹೀನತೆಯೋ, ನೀರಸತೆಯೋ ಕಾಣಲಿಲ್ಲ. ಎಂದಿನಂತೆ ಉತ್ಸಾಹದಿಂದಲೇ ಪ್ರವರ್ತಿಸಿಕೊಂಡಿದ್ದಳು. ಅವಳ ಸೌಂದರ್ಯಕ್ಕಾಗಲೀ, ಚುರುಕುತನಕ್ಕಾಗಲೀ ಯಾವ ಕೊರತೆಯೂ ಬರಲಿಲ್ಲ. ಹಾಗಾದರೆ ಅವಳು ತನಗೆ ತಿಳಿಯದಂತೆ ರಹಸ್ಯವಾಗಿ ಊಟ ಮಾಡುತ್ತಾಳೆಯೆ ? ಹಾಗೇಕೆ ಮಾಡಬೇಕು ? ಇದೊಂದು ಅನುಮಾನ ಉಂಟಾಯಿತು ಗಂಡನಿಗೆ. ಅನುಮಾನವನ್ನು ಪರಿಹರಿಸಿಕೊಳ್ಳದೆ ಸುಖವಾಗಿರುವುದು ಹೇಗೆ ? ತಾನು ಮಾತ್ರ ಹೊಟ್ಟೆ ತುಂಬ ಉಣ್ಣುವುದಾದರೂ ಹೇಗೆ ?

ಒಂದು ದಿನ ರಾತ್ರಿ ಅವಳು ಏನು ಮಾಡುವಳೆಂದು ಕಂಡುಹಿಡಿಯಲು ನಿಶ್ಚಯಿಸಿ ಸುಮಾನ್, ಹಾಸಿಗೆಯಲ್ಲಿ ನಿದ್ದೆ ಬಂದಂತೆ ನಟಿಸಿಕೊಂಡು ಎಚ್ಚರದಲ್ಲೇ ಇದ್ದನು.

ಅರೇಬಿಯಾ ಕಥೆ



ಸರಿಯಾಗಿ ಮಧ್ಯ ರಾತ್ರಿಯ ಹೊತ್ತಿಗೆ, ಆ ಯುವತಿ ಮೆಲ್ಲನೆ ಹಾಸಿಗೆಯಿಂದೆದ್ದು ಸಪ್ಪಳವಾಗದಂತೆ ಎಚ್ಚರಿಕೆ ವಹಿಸಿ ಹೊರಗೆ ಹೋಗುವುದನ್ನು ನೋಡಿ ಸುಮಾನ್ ಕೂಡಾ ಎದ್ದನು. ಅವಳಿಗೆ ತಿಳಿಯದಂತೆ ಬಹು ಜಾಗರೂಕತೆಯಿಂದ ಅವನೂ ಶಬ್ದ ಮಾಡದೆ ಅವಳ ಹಿಂದೆ ಹೊರಟನು, ಒಬ್ಬಳೇ ಹೋಗುವ ಅವಳ ಧೈರ್ಯಕ್ಕೆ ಆಶ್ಚರ್ಯಪಡುತ್ತಾ.

ಅವಳು ಕತ್ತಲೆಯಲ್ಲೇ ನಗರಕ್ಕೆ ದೂರದಲ್ಲಿರುವ ಸ್ಮಶಾನಕ್ಕೆ ಹೋಗಿ ತಲಪಿದಳು. ಸ್ಮಶಾನವನ್ನು ತಾಗಿಕೊಂಡು ಒಂದು ಮುಂಡುಗೋಡೆಯಿದ್ದಿತು. ಅದರ ಮೇಲೆ ಕುಳಿತಿದ್ದ ದೆವ್ವವು ಅವಳು ಹತ್ತಿರ ಬರುತ್ತಲೇ ತನ್ನ ಕೈಯನ್ನು ನೀಡಿತು. ಯುವತಿ ಅತ್ಯಾನಂದದಿಂದ ಆ ದೆವ್ವದ ಕೈಯನ್ನು ಹಿಡಿದು ಗೋಡೆಯ ಮೇಲೇರಿ ಆಚೆಗೆ ಹಾರಿದಳು. ಆಮೇಲೆ ದೆವ್ವವೂ ಅವಳೂ ಏನಾದರೋ ಕಾಣಲಿಲ್ಲ. ಶಬ್ದವೂ ಕೇಳಲಿಲ್ಲ.

ಆ ದೃಶ್ಯವನ್ನು ನೋಡಿ ಸುಮಾನ್ ದಿಗ್ಭ್ರಾಂತನಾದನು. ಆ ದೆವ್ವವೂ ತನ್ನ ಹೆಂಡತಿಯೂ ಕೂಡಿ ಸ್ಮಶಾನದಾಚೆಗೆ ಹೋಗಿ ಏನೇನು ಮಾಡುವರು, ಎಂತೆತಹುದನ್ನು ತಿನ್ನುವರು ಎಂಬುದನ್ನು ಊಹಿಸಲಿಕ್ಕೂ ಅವನಿಗೆ ಧೈರ್ಯ ಬರಲಿಲ್ಲ. ಅವನ ರೋಮಗಳೆಲ್ಲ ಜುಮುಗುಟ್ಟಿ ನಿಂತವು.

ಅವನು ಅಲ್ಲಿಂದ ಓಡೋಡುತ್ತ ಮನೆಗೆ ಬಂದು ಯಥಾಪ್ರಕಾರ ನಿದ್ದೆ ಮಾಡುವಂತೆ ಮಲಗಿಕೊಂಡನು. ಒಂದು ಗಂಟೆ ಕಳೆದ ಮೇಲೆ ಆ ಯುವತಿ ಬರುವುದನ್ನು ಗಮನಿಸಿದನು. ತನ್ನ ಹೆಂಡತಿಯನ್ನು ಒಳ್ಳೆಯ ಮಾರ್ಗದಲ್ಲಿ ಇರಿಸುವುದು ಹೇಗೆಂಬ ಸಮಸ್ಯೆ ಅವನನ್ನು ಪೀಡಿಸಿಕೊಂಡಿದ್ದಿತು. ಸಿಟ್ಟು ಮಾಡಿ ಮಾತಾಡಿದರೆ ಏನು ಅನಾಹುತವಾಗುವುದೋ ಎಂಬ ಭಯ !

ಮರುದಿನ ಊಟಕ್ಕೆ ಕುಳಿತಾಗ ಸುಮಾನ್ ತನ್ನ ಹೆಂಡತಿಯನ್ನು ನೋಡಿ, “ನಿನಗೆ ಎಂತಹ ಆಹಾರ ಬೇಕಾದರೂ ಕೊಂಡುಕೊಳ್ಳಲು ಬೇಕಾಗುವಷ್ಟು ಹಣ ನನ್ನ ಹತ್ತಿರವಿದೆ. ಹಾಗಿರುವಾಗ ನೀನು ಮಧ್ಯರಾತ್ರಿಯಲ್ಲಿ ಎದ್ದು ಕತ್ತಲೆಯಲ್ಲಿ ತಡಕಾಡುತ್ತ ಸ್ಮಶಾನದವರೆಗೆ ಯಾಕೆ ಹೋಗಬೇಕು ? ನಿನ್ನ ಕಷ್ಟ ನೋಡಿ ನಾನು ಹೇಗೆ ಸಹಿಸಲಿ ? ನನ್ನೊಡನೆ ಒಂದು ಮಾತು ಹೇಳಿದರೆ ನಿನಗೆ ಏನು ಬೇಕಾದರೂ ತರುತ್ತೇನಲ್ಲಾ ?” ಎಂದನು ಶಾಂತತೆಯಲ್ಲೇ.

ಅವನ ಮಾತು ಕೇಳಿದ ಕೂಡಲೇ ಯುವತಿಯ ಮುಖವು ಮಹಾ ಕೋಪದಿಂದ ಬೆಂಕಿಯ ಕೆಂಡದಂತಾಯಿತು. ತನ್ನ ರಹಸ್ಯವು ಬಯಲಾಯಿತೆಂದು ತಿಳಿದು, ಒಂದು ಲೋಟೆಯಲ್ಲಿದ್ದ ನೀರನ್ನು ತೆಗೆದುಕೊಂಡು ಮಂತ್ರವನ್ನು ಮುಣುಮುಣಿಸಿ ಅದನ್ನು ಸುಮಾನ್ ಮೇಲೆ ಚೆಲ್ಲಿದಳು. ಮರುಕ್ಷಣದಲ್ಲೇ ಸುಮಾನ್ ನಾಯಿಯಾದನು.

ಅಲ್ಲಿಂದ ತಪ್ಪಿಸಿಕೊಳ್ಳಬೇಕೆಂದು ನಾಯಿಯಾದ ಸುಮಾನ್ ಹೊರಗೆ ಓಡಿದನು. ನಾಯಿಯ ಕುತ್ತಿಗೆಯನ್ನು ಬಾಗಿಲ ಸಂದಿನಲ್ಲಿ ಒತ್ತಿ ಕೊಂದು ಬಿಡಬೇಕೆಂದು ಆ ಯುವತಿ ಪ್ರಯತ್ನಪಟ್ಟಳು. ಅದಕ್ಕೆ ಸಿಕ್ಕದೆ ಅವನು ತಪ್ಪಿಸಿಕೊಂಡನು. ಆದರೆ ಬಾಗಿಲ ಸಂದಿನಲ್ಲಿ ಅರ್ಧ ಬಾಲ ಸಿಕ್ಕಿಕೊಂಡು ಬಲವಾಗಿ ಎಳೆದು ಹಾರಿದಾಗ, ಎಳೆತದಲ್ಲಿ ಅರ್ಧ ಬಾಲ ತುಂಡಾಗಿ ಹೋಯಿತು.

ತುಂಡು ಬಾಲದೊಂದಿಗೆ ಮನೆಯಿಂದ ಹೊರ ಬಿದ್ದು ಓಡುತ್ತಿರುವ ಆ ನಾಯಿಯನ್ನು ನೋಡಿ, ಬೀದಿಯ ನಾಯಿಗಳೆಲ್ಲಾ ಓಡಿಸಿಕೊಂಡು ಬಂದುವು. ಅವುಗಳ ಕಾಟದಿಂದ ತಪ್ಪಿಸಿಕೊಳ್ಳಲು ಸುಮಾನ್ ನಾಯಿ ಒಂದು ಅಂಗಡಿಯೊಳಗೆ ಹೊಕ್ಕಿತು. ಆ ಅಂಗಡಿಯ ಯಜಮಾನನು ದಯಾಗುಣದವನಾದು ದರಿಂದ ಬೀದಿ ನಾಯಿಗಳನ್ನು ಓಡಿಸಿ ಅದನ್ನು ಕಾಪಾಡಿದನು. ಆ ನಾಯಿ ಕೃತಜ್ಞತೆಯಿಂದ ತುಂಡು ಬಾಲ ಆಡಿಸುತ್ತ, ಅಂಗಡಿಯವನನ್ನು ಮುಗ್ಧಭಾವ ದಲ್ಲಿ ನೋಡುತ್ತ, ಆ ವ್ಯಾಪಾರಿಯ ಪ್ರೇಮಕ್ಕೆ ಪಾತ್ರವಾಯಿತು. ಅಲ್ಲಿಯೇ ದಿನ ಕಳೆಯತೊಡ ಗಿತು ನಾಯಿ.

ಒಂದು ದಿನ ಸರಕುಗಳನ್ನು ಕೊಂಡುಕೊಳ್ಳಲು ಅಂಗಡಿಗೆ ಬಂದ ಸ್ತ್ರೀಯೊಬ್ಬಳು ತಾನು ಕೊಂಡು ಕೊಂಡ ಸರಕುಗಳಿಗೆ ಹಣವನ್ನು ಕೊಟ್ಟಳು. ಅದರಲ್ಲಿ ಒಂದು ನಾಣ್ಯ ನಡೆಯುವುದಿಲ್ಲವೆಂದು ವ್ಯಾಪಾರ ದವನು ಹೇಳಿದನು. ಅವನು ಹಾಗೆ ಹೇಳಿದುದನ್ನು ಕೇಳಿ ಅವಳಿಗೆ ದೊಡ್ಡ ಸಿಟ್ಟು ಬಂತು, "ನಡೆಯದೆ ಏನಾಗಿದೆ ಈ ನಾಣ್ಯಕ್ಕೆ ?" ಎಂದು ಕೋಪದಿಂದ ದುರುಗುಟ್ಟಿದಳು.

"ಇದಕ್ಕೆ ಅಷ್ಟು ಕೋಪ ಮಾಡುವಿರೇಕೆ ? ಇದು ನಡೆಯದ ನಾಣ್ಯವೆಂದು ನನ್ನ ನಾಯಿ ಕೂಡಾ ಹೇಳುತ್ತದೆ" ಎಂದನು.



"ಹಾಗೇನು ? ಎಲ್ಲಿ ? ನಾಯಿಯಿಂದ ಹೇಳಿಸಿರಿ ನೋಡುವಾ !" ಎಂದು ಆ ಹೆಂಗುಸು ತನ್ನ ಹತ್ತಿರ ವಿದ್ದ ಎಲ್ಲಾ ನಾಣ್ಯವನ್ನೂ ನೆಲದ ಮೇಲೆ ಹಾಕಿದಳು.

ನಾಯಿ ತನ್ನ ಕಾಲುಗಳಿಂದ ಒಳ್ಳೆಯ ನಾಣ್ಯ ಗಳನ್ನೆಲ್ಲಾ ತೆಗೆದು ಆಚೆಗಿಟ್ಟು, ನಕಲೀ ನಾಣ್ಯವನ್ನು ಮಾತ್ರ ಮುಟ್ಟಲಿಲ್ಲ. ಅಂಗಡಿಯವನು ಹೇಳದೆಯೇ, ತಮ್ಮ ಮಾತುಗಳನ್ನು ಅರ್ಥಮಾಡಿಕೊಂಡು ನಾಯಿ ಹಾಗೆ ಮಾಡಿದುದು ನೋಡಿ ಅವಳಿಗೆ ಬಹಳ ಆಶ್ಚರ್ಯವಾಯಿತು.

ತನ್ನ ನಾಯಿ ನಕಲಿ ನಾಣ್ಯವನ್ನು ಕಂಡುಹಿಡಿದ ಸಂಗತಿಯನ್ನು ಅಂಗಡಿಯವನು ಎಲ್ಲರೊಂದಿಗೆ ಹೆಮ್ಮೆಯಿಂದ ಹೇಳತೊಡಗಿದನು. ಕೆಲವರು ಬೇಕೆಂತಲೇ, ಒಳ್ಳೆಯ ನಾಣ್ಯಗಳೊಂದಿಗೆ ಕಳ್ಳ ನಾಣ್ಯಗಳನ್ನು ಬೆರೆಸಿ ಆ ನಾಯಿಯ ಮುಂದೆ ಇಡುತ್ತಿದ್ದರು. ನಾಯಿ ಕ್ಷಣಮಾತ್ರದಲ್ಲಿ ಕಳ್ಳ ನಾಣ್ಯಗಳನ್ನು ಬೇರ್ಪಡಿಸಿ ತೋರಿಸುತ್ತಿತ್ತು.

"ಒಂದು ದಿನ ವ್ಯಾಪಾರಿ ಅಂಗಡಿಯಲ್ಲಿ ಬೇಕಾದ ಸರಕುಗಳನ್ನು ಇಳಿಸಿಕೊಳ್ಳುವ ಗಡಿಬಿಡಿಯಲ್ಲಿದ್ದನು. ಆ ಸಮಯದಲ್ಲಿ ಒಬ್ಬ ಮುದುಕಿ ಅಲ್ಲಿಗೆ ಬಂದು ನಾಯಿಯನ್ನು ತನ್ನೊಂದಿಗೆ ಬರುವಂತೆ ಸನ್ನೆ ಮಾಡಿದಳು. ನಾಯಿ ಸೀದಾ ಅವಳ ಹಿಂದೆಯೇ ಹೋಯಿತು.

ಆ ಮುದುಕಿ ತನ್ನ ಮನೆಗೆ ಹೋದ ಕೂಡಲೇ, "ನೋಡೇ ಹುಡುಗೀ, ನಾಯಿ ನಕಲೀ ನಾಣ್ಯಗಳನ್ನು ಕಂಡುಹಿಡಿಯುವುದನ್ನು ಎಲ್ಲಿಯಾದರೂ ನೋಡಿರು ವಿಯಾ ? ಯಾವ ಮಾಂತ್ರಿಕನೋ, ಮಾಂತ್ರಿಕಳೋ ಮನುಷ್ಯನನ್ನು ಹೀಗೆ ನಾಯಿಯಾಗಿ ಮಾರ್ಪಡಿಸಿರ ಬೇಕೆಂದು ನನಗೆ ಅನುಮಾನವಾಗಿದೆ. ಈ ನಾಯಿ ಯನ್ನು ಸ್ವಲ್ಪ ನೋಡಮ್ಮ" ಎಂದಳು ತನ್ನ ಮಗಳೊಂದಿಗೆ.

ಇಪ್ಪತ್ತು ವರ್ಷ ವಯಸ್ಸಿನ ಮಗಳು ಮನೆ ಯೊಳಗಿನಿಂದ ಹೊರಗೆ ಬಂದು, ನಾಯಿಯನ್ನು ಸ್ವಲ್ಪ ಹೊತ್ತು ದಿಟ್ಟಿಸಿ ಪರಿಶೀಲನೆ ಮಾಡಿ ನೋಡಿದಳು. ಆಮೇಲೆ ಕೂಜಾದಲ್ಲಿದ್ದ ನೀರನ್ನು ತೆಗೆದುಕೊಂಡು ಏನೋ ಮಂತ್ರವನ್ನು ಜಪಿಸಿ ಆ ಮಂತ್ರಜಲವನ್ನು ನಾಯಿಯ ಮೇಲೆ ಚಿಮುಗಿಸಿದಳು.

ಕೂಡಲೇ ನಾಯಿ ಮಾಯವಾಗಿ ಸುಮಾನ್ ಮೊದಲಿನ ರೂಪದಲ್ಲಿ ಪ್ರತ್ಯಕ್ಷನಾದನು. ಅವನು ಆನಂದಬಾಷ್ಪ ತುಂಬಿದ ಕಣ್ಣುಗಳಿಂದ ಆ ಯುವತಿಗೆ ನಮಸ್ಕಾರ ಮಾಡಿ, ತನಗೆ ಹೇಗೆ ನಾಯಿಯ ರೂಪ ಬಂದಿತೆಂಬುದನ್ನೆಲ್ಲಾ ಅವಳೊಂದಿಗೆ ಹೇಳಿದನು.

ಆ ಯುವತಿಗೆ ಮಂತ್ರ ತಂತ್ರಗಳು ಚೆನ್ನಾಗಿ ಗೊತ್ತಿದ್ದುವು. ಅವಳು ಅವುಗಳನ್ನು ಹತ್ತು ಜನರಿಗೆ ಉಪಯೋಗವಾಗುವ ಕಾರ್ಯಕ್ಕೆ ಮಾತ್ರವೇ ಉಪ ಯೋಗಿಸುತ್ತಿದ್ದಳು. ಅವಳು ಸುಮಾನ್ ಕೈಗೆ ಸ್ವಲ್ಪ ಮಂತ್ರಜಲವನ್ನು ಕೊಟ್ಟು, ಅವನು ಏನು ಮಾಡ ಬೇಕೆಂಬುದನ್ನು ಹೇಳಿ ಕಳುಹಿಸಿಕೊಟ್ಟಳು.

ಸುಮಾನ್ ಅಲ್ಲಿಂದ ಹೊರಟು ತನ್ನ ಮನೆಗೆ ಹೋಗಿ ಮುಟ್ಟಿದನು. ತನ್ನನ್ನು ನಾಯಿಯಾಗಿ ಮಾಡಿದ ಯುವತಿ ಆ ಮನೆಯಲ್ಲಿರಲಿಲ್ಲ. ಅವಳು ಬರುವುದನ್ನು ಕಾಯುತ್ತ ಸುಮಾನ್ ಅಲ್ಲಿಯೇ ಕುಳಿತನು. ಸ್ವಲ್ಪಹೊತ್ತಿನ ಮೇಲೆ ಅವಳು ಅಲ್ಲಿಗೆ ಬಂದು ಸುಮಾನ್‌ನನ್ನು ನೋಡಿ ಬೆರಗಾಗಿ ನಿಂತಳು. ಮತ್ತೆ ಅವನ ಮೇಲೆ ಮಂತ್ರ ಪ್ರಯೋಗ ಮಾಡಲು ನೀರಿಗಾಗಿ ಅತ್ತಿತ್ತ ನೋಡಿದಳು. ಅಷ್ಟ ರೊಳಗೆ ಸುಮಾನ್ ತಾನು ತಂದುಕೊಂಡಿದ್ದ ಮಂತ್ರ ಜಲವನ್ನು ಅವಳ ಮೇಲೆ ಚೆಲ್ಲಿಬಿಟ್ಟನು.

ಕೂಡಲೇ ಅಪೂರ್ವ ಸುಂದರಿಯಾಗಿದ್ದ ಅವಳು ಒಂದು ಕುದುರೆಯ ಮರಿಯಾಗಿ ಬದಲಾಯಿಸಿ, ಹಾರಿ ಹಾರಿ ತುಳ್ಳುತ್ತಾ ಎತ್ತಲೋ ಓಡಿಹೋದಳು.






ಸಗರ ಕುಮಾರರೆಲ್ಲರೂ ಕುದುರೆ ಮಾಯವಾದ ಸ್ಥಳಕ್ಕೆ ಹೋಗಿ, ಕುದುರೆ ಭೂಮಿಯೊಳಗೆ ಹೋದ ಸೂಚನೆಯನ್ನು ನೋಡಿ, ಅಲ್ಲಿ ಅಗೆಯತೊಡಗಿದರು. ಹಾಗೆ ಅಗೆಯುತ್ತ, ಪಾತಾಳದವರೆಗೂ ಹೋದರು. ಅಲ್ಲಿ ತಪಸ್ಸಿನಲ್ಲಿರುವ ಕಪಿಲ ಮಹಾಮುನಿಯನ್ನು ನೋಡಿದರು. ಅವನ ಸಮೀಪದಲ್ಲಿಯೇ ಅವರಿಗೆ ಬೇಕಾದ ಯಾಗಾಶ್ವವು ನಿಂತುಕೊಂಡಿದ್ದಿತು.

ಆದುದರಿಂದ ಅವನೇ ಕುದುರೆಯನ್ನು ಅಪಹರಿಸಿದವನೆಂದುಕೊಂಡು ಸಗರ ಕುಮಾರರು ಅವನನ್ನು ಹಿಡಿದು ಬಂಧಿಸಲು ನೋಡಿದರು. ಅವನು ಕಣ್ಣು ತೆರೆದು ನೋಡಿದ ಕೂಡಲೇ ಅರುವತ್ತು ಸಾವಿರ ಮಂದಿ ಸಗರ ಪುತ್ರರೂ ಒಮ್ಮೆಗೇ ಉರಿದು ಬೂದಿಯ ಶಾಶಿಯಾಗಿ ಬಿದ್ದರು.

ಈ ಘೋರ ಸಮಾಚಾರವು ನಾರದನ ಮೂಲಕವಾಗಿ ಸಗರನಿಗೆ ಗೊತ್ತಾಯಿತು. ಅವನು ಯಾಗಾಶ್ವವನ್ನು ಹೇಗಾದರೂ ತೆಗೆದುಕೊಂಡು ಬರುವಂತೆ, ಅಸಮಂಜಸನ ಮಗನಾದ ಅಂಶುಮಂತನನ್ನು ಪಾತಾಳದ ಕಡೆಗೆ ಕಳುಹಿಸಿಕೊಟ್ಟನು.

ಅಂಶುಮಂತನು ಪಾತಾಳ ಲೋಕಕ್ಕೆ ಹೋಗಿ ಅಲ್ಲಿರುವ ಕಪಿಲ ಮುನಿಯನ್ನು ನೋಡಿ ನಮಸ್ಕಾರ ಮಾಡುತ್ತ ಸುಮ್ಮನೆ ನಿಂತನು.

ಕಪಿಲನು ಅವನನ್ನು ನೋಡಿ ಸಂತೋಷಪಟ್ಟು, "ಅಪ್ಪಾ, ಕುದುರೆಯನ್ನು ತೆಗೆದುಕೊಂಡು ಹೋಗು. ಇವರೆಲ್ಲರೂ ವಿಚಾರಸಾಚಾರವಿಲ್ಲದೆ ಪ್ರವರ್ತಿಸಿ ಭಸ್ಮವಾಗಿರುವರೆಂದು ನಿನ್ನ ತಾತನೊಂದಿಗೆ ಹೇಳು" ಎಂದನು.

"ಓ ಮಹಾತ್ಮಾ, ಈ ಸತ್ತುಹೋದ ತಂದೆಯರಿಗೆ ಸ್ವರ್ಗ ಪ್ರಾಪ್ತಿಯಾಗುವ ದಾರಿಯನ್ನು ದಯಮಾಡಿ ಹೇಳಬೇಕು" ಎಂದು ಅಂಶುಮಂತನು ಕಪಿಲನನ್ನು ಬೇಡಿಕೊಂಡನು.

ಇವರ ಪಾಪವು ಇನ್ನೂ ಕೆಲವು ಜನ್ಮಗಳನ್ನು ಎತ್ತಿದ ಹೊರತು ತೀರದು. ನಿನಗೆ ಹುಟ್ಟಲಿರುವ ಮೊಮ್ಮಗನ ಮೂಲಕವಾಗಿ ಇವರಿಗೆ ಮುಕ್ತಿ ಲಭಿಸು

೧೪. ಗಂಗಾವತರಣ



ತ್ತದೆ" ಎಂದು ಕಪಿಲಮುನಿ ಹೇಳಿದನು. ಅಂಶುಮಂತನು ಯಾಗಾಶ್ವವನ್ನು ತೆಗೆದುಕೊಂಡು ಬಂದು ಸಗರನಿಗೆ ಕೊಟ್ಟನು. ಸಗರನು ಅಶ್ವಮೇಧಯಾಗವನ್ನು ಪೂರ್ಣಗೊಳಿಸಿ, ಅಂಶುಮಂತನಿಗೆ ಪಟ್ಟಾಭಿಷೇಕವನ್ನೂ ಮಾಡಿದನು.

ರಾಜನಾದ ಮೇಲೆ ಕೂಡಾ ಅಂಶುಮಂತನಿಗೆ ತನ್ನ ತಂದೆಯರ ಮುಕ್ತಿಯನ್ನು ಕುರಿತು ವಿಚಾರ ಹಿಡಿದುಕೊಂಡಿತು. ಹಾಗಿರಲು ಒಂದು ಸಾರಿ ಗರುತ್ಮಂತನು ಅವನನ್ನು ನೋಡಿ, "ಗಂಗೆಯನ್ನು ನಿನ್ನ ತಂದೆಯರ ಬೂದಿಯ ರಾಶಿಯ ಮೇಲೆ ಪ್ರವಹಿಸುವಂತೆ ಮಾಡಿದರೆ ಅವರಿಗೆ ಮುಕ್ತಿ ಲಭಿಸುತ್ತದೆ" ಎಂದು ಹೇಳಿದನು.

ಗಂಗೆಯನ್ನು ಭೂಮಿಯಲ್ಲಿ ಅವತರಿಸುವಂತೆ ಮಾಡಲು ಅಂಶುಮಂತನು, ತನ್ನ ಮಗನಾದ ದಿಲೀಪನಿಗೆ ಪಟ್ಟಗಟ್ಟಿ ತಾನು ಅರಣ್ಯಕ್ಕೆ ಹೋಗಿ ತಪಸ್ಸುಮಾಡಲು ಪ್ರಾರಂಭಿಸಿದನು.

ಆದರೆ ಅವನ ತಪಸ್ಸು ಫಲಿಸುವುದಕ್ಕೆ ಮೊದಲೇ ಅವನ ಆಯುಷ್ಯದ ಕಾಲವೇ ತೀರಿಹೋಯಿತು.

ಆಮೇಲೆ ರಾಜನಾದ ದಿಲೀಪನ ಮಗನಾದ ಭಗೀರಥನು, ತನ್ನ ತಾತಂದಿರಿಗೆ ನಡೆದ ದುಸ್ಥಿತಿಯನ್ನು ಕೇಳಿ, ಅವರನ್ನು ಹೇಗಾದರೂ ಉದ್ಧರಿಸಬೇಕೆಂದು ದೃಢ ನಿಶ್ಚಯ ಮಾಡಿ ಬ್ರಹ್ಮನನ್ನು ಆರಾಧಿಸಲು ತೊಡಗಿದನು.

ಅವನ ಭಕ್ತಿಶ್ರದ್ಧೆಗಳಿಗೆ ಮೆಚ್ಚಿದ ಬ್ರಹ್ಮನು ಪ್ರತ್ಯಕ್ಷನಾಗಿ, ಭಗೀರಥನು ಧರ್ಮಮಾರ್ಗ ತಪ್ಪದಂತೆ ತನ್ನ ಇಷ್ಟ ಪ್ರಕಾರ ಜೀವಿಸಬಹುದೆಂದು ವರವನ್ನು ಕೊಟ್ಟನು.

ತರುವಾಯ ಭಗೀರಥನು ಗಂಗೆಯನ್ನು ಧ್ಯಾನಿಸಿ ಬಹು ದೀರ್ಘಕಾಲದವರೆಗೆ ತಪಸ್ಸು ಮಾಡಿದನು. ಕಡೆಗೆ ಗಂಗಾದೇವಿ ಅವನ ಮುಂದೆ ಸಾಕ್ಷಾತ್ಕರಿಸಿ, ಅವನ ಕೋರಿಕೆಯನ್ನು ಸಾವಧಾನವಾಗಿ ಕೇಳಿ, "ನಾನು ಸ್ವರ್ಗ ಲೋಕದಿಂದ ಭೂಮಿಯ ಮೇಲೆ ಬೀಳುವಾಗ ನನ್ನ ವೇಗವನ್ನು ಯಾರು ತಡೆದುಕೊಳ್ಳುತ್ತಾರೆ? ನಾನು ಬೀಳುವ ವೇಗದಲ್ಲಿ ಭೂಮಿ ಸೀಳಿಕೊಂಡು ಪಾತಾಳದವರೆಗೆ ಹೋಗಬೇಕಾದವಳಾಯಿತಷ್ಟೆ?" ಎಂದು ಭಗೀರಥನನ್ನು ಕೇಳಿದಳು.

"ತಾಯೀ, ಪ್ರಪಂಚವನ್ನೇ ತನ್ನಲ್ಲಿ ಹುದುಗಿಸಿಕೊಂಡಿರುವ ಶಿವನು ನಿನ್ನ ವೇಗವನ್ನು ತಡೆಯುವನೆಂದು ನನಗೆ ಕಾಣುತ್ತದೆ. ಅದಕ್ಕೆ ಬೇರೆ ಯಾರೂ ಶಕ್ತರಲ್ಲ" ಎಂದನು ಭಗೀರಥ.

"ನಾನು ಒಂದು ವೇಳೆ ಭೂಮಿಗೆ ಬಂದರೆ ಪಾಪಿಗಳೆಲ್ಲರೂ ತಮ್ಮ ತಮ್ಮ ಪಾಪಗಳನ್ನು ನನ್ನಲ್ಲಿಯೇ ತೊಳೆದುಕೊಳ್ಳುತ್ತಾರೆ. ಹಾಗೆ ನನ್ನಲ್ಲಿ ಸೇರುವ ಪಾಪಗಳನ್ನು ನಾನು ಹೇಗೆ ಕಳೆದುಕೊಳ್ಳಬಲ್ಲೆನು?" ಎಂದು ಗಂಗಾದೇವಿ ಪುನಃ ಕೇಳಿದಳು.

"ದೇವೀ, ಎಲ್ಲಾ ಪಾಪಗಳನ್ನೂ ಪರಿಹರಿಸಿಕೊಳ್ಳಬಲ್ಲ ಶ್ರೀ ಹರಿಯನ್ನು ತಮ್ಮ ಹೃದಯದಲ್ಲಿ



ಇರಿಸಿಕೊಂಡಿರುವ ಪುಣ್ಯಾತ್ಮರು ಮಾಡುವ ಸ್ನಾನಗಳಿಂದ ನಿನ್ನಲ್ಲಿ ಸೇರುವ ಪಾಪಗಳೆಲ್ಲವೂ ಪರಿಹಾರವಾಗಿ ಹೋಗುತ್ತದೆ" ಎಂದನು ಭಗೀರಥ.

"ನಿಜ. ಚೆನ್ನಾಗಿ ಹೇಳಿದೆ. ನಿನ್ನ ಕೋರಿಕೆಯನ್ನು ನೆರವೇರಿಸುತ್ತೇನೆ. ನಾನು ಸ್ವರ್ಗದಿಂದ ಬೀಳುವಾಗ ನನ್ನನ್ನು ತಾಳಿಕೊಳ್ಳುವಂತೆ ಶಿವನನ್ನು ಒಪ್ಪಿಸುವುದು ನಿನ್ನ ಕೆಲಸ" ಎಂದು ಹೇಳಿ ಗಂಗಾದೇವಿ ಅಂತರ್ಧಾನಳಾದಳು.

ಭಗೀರಥನು ಮತ್ತೆ ಶಿವನನ್ನು ಕುರಿತು ತಪಸ್ಸು ಮಾಡಿ, ಆ ದೇವನನ್ನು ಸುಲಭವಾಗಿಯೇ ಪ್ರತ್ಯಕ್ಷ ಮಾಡಿಕೊಂಡನು. ಭಗೀರಥನ ಕೋರಿಕೆಯನ್ನು ಕೇಳಿ, ಶಿವನು ಅವನ ಅಪೇಕ್ಷೆಯನ್ನು ನಡೆಸಿಕೊಡಲು ಅಂಗೀಕರಿಸಿಕೊಂಡನು.

ಆಕಾಶದಿಂದ ಗಂಗೆ ನೆಟ್ಟಗೆ ಶಿವನ ತಲೆಯ ಮೇಲೆ ಬಿದ್ದಳು. ತರುವಾಯ ಶಿವನ ಜಡೆಗಳ ಸಂದಿನಿಂದ ಜಾರಿ, ಭೂಮಿಯ ಮೇಲೆ ಪ್ರವಹಿಸಲು ತೊಡಗಿದಳು. ಭಗೀರಥನು ವಾಯುವೇಗದ ರಥದ ಮೇಲೆ ಕುಳಿತು ದಾರಿ ತೋರಿಸಿಕೊಂಡು ಹೋಗುತ್ತಿರಲು, ಗಂಗೆ ಅವನ ಹಿಂದೆಯೇ ಸಾಗುತ್ತ ಪಾತಾಳಕ್ಕಿಳಿದು, ಸಗರ ಪುತ್ರರ ಭಸ್ಮರಾಶಿಯ ಮೇಲೆ ಪ್ರವಹಿಸಿ ಸಮುದ್ರವಾಗಿ ನಿಂತಳು. ಆದುದರಿಂದಲೇ ಸಮುದ್ರಕ್ಕೆ ಸಾಗರವೆಂದು ಹೆಸರು ಬಂದಿತು.

**ಸ್ವಾ**ಯಂಭೂ ಮನುವಿನ ಕಾಲದಲ್ಲಿ ಒಂದು ಸಾರಿ ಅರುವತ್ತು ಸಂವತ್ಸರಗಳವರೆಗೆ ಮಳೆಯೇ ಬಾರದೆ ಅತಿ ಭಯಂಕರವಾದ ಪರಿಸ್ಥಿತಿ ಏರ್ಪಟ್ಟಿತು. ವಿಪರೀತವಾದ ಜನಕ್ಷಯ ಜಂತುಕ್ಷಯಗಳಾಗಿ ಪ್ರಾಣಿಕೋಟಿಗಳ ಜೀವಿತವೆಲ್ಲಾ ಅಸ್ತವ್ಯಸ್ತವಾಗಿ ಹೋಯಿತು, ಅದನ್ನು ನೋಡಿ ಬ್ರಹ್ಮನು ಪ್ರಪಂಚವನ್ನೆಲ್ಲಾ ಸರಿಯಾಗಿ ನಡೆಯಿಸ ಬಲ್ಲವನನ್ನು ರಾಜನನ್ನಾಗಿ ಮಾಡಬೇಕೆಂದು ಸಂಕಲ್ಪಿಸಿದನು. ಆಗ ಅವನಿಗೆ ಮನು ವಂಶದಲ್ಲಿ ರಿಪುಂಜಯನೆಂಬ ಸಕಲ ಸದ್ಗುಣ ಸಂಪನ್ನನೊಬ್ಬನು ಕಂಡುಬಂದನು. ಬ್ರಹ್ಮನು ರಿಪುಂಜಯನನ್ನು ನೋಡಿ, "ಅಪ್ಪಾ, ನಿನಗೆ ಪ್ರಪಂಚಾಧಿಪತ್ಯವನ್ನು ಕೊಡುತ್ತೇನೆ. ನೀನು ದಿವೋದಾಸನೆಂಬ ಹೆಸರಿನಿಂದ ಪ್ರಪಂಚವನ್ನು ಸಮರ್ಥತೆಯಿಂದ ಪರಿಪಾಲಿಸು, ವಾಸುಕಿಯ ಕುಮಾರಿಯಾದ ಅನಂಗಮೋಹಿನಿ ನಿನಗೆ ಪತ್ನಿಯಾಗುತ್ತಾಳೆ" ಎಂದನು.

ಬ್ರಹ್ಮನ ಮಾತು ಕೇಳಿ ರಿಪುಂಜಯನು, "ಓ ತಾತಯ್ಯಾ, ನನಗೊಂದು ವರವನ್ನು ಅನುಗ್ರಹಿಸಿದರೆ ಮಾತ್ರ ನೀವು ಹೇಳುವಂತೆ ಭೂಭಾರವನ್ನು ವಹಿಸಿಕೊಳ್ಳುತ್ತೇನೆ. ಆ ವರವು ಏನೆಂದರೆ, ಭೂಮಿಯ ಮೇಲೆ ಕೆಳಗಿನ ಲೋಕದವರಾಗಲೀ, ಮೇಲಿನ ಲೋಕದವರಾಗಲೀ ಒಬ್ಬರೂ ಇರಕೂಡದು" ಎಂದನು. ಅವನು ಕೇಳಿಕೊಂಡಂತೆಯೇ ಬ್ರಹ್ಮನು ಒಪ್ಪಿಕೊಂಡು, ಈ ಸಂಗತಿಯನ್ನು

ಕಾಶಿಯು ವಿಶ್ವೇಶ್ವರನಿಗೆ ತಿಳಿಯಪಡಿಸಿದನು. ಹಾಗೆಯೇ ಆಗಲೆಂದು ವಿಶ್ವೇಶ್ವರನೂ ಒಪ್ಪಿದ ಮೇಲೆ ಬ್ರಹ್ಮನು ರಿಪುಂಜಯನಿಗೆ ವರವನ್ನು ಕೊಟ್ಟು ಪಟ್ಟಕಟ್ಟಿ, ತನ್ನ ಲೋಕಕ್ಕೆ ಹೊರಟುಹೋದನು. ರಿಪುಂಜಯನು ದಿವೋದಾಸನೆಂಬ ಬಿರುದಿನಿಂದ ರಾಜನಾಗಿ, ಪ್ರಪಂಚದ ಮೇಲೆ ದೇವತೆಗಳಾಗಲೀ, ಪಾತಾಳದವರಾಗಲೀ ಇರಬಾರದೆಂದು ಪ್ರಪಂಚದೊಳಗೆಲ್ಲಾ ಡಂಗುರ ಸಾರಿಸಿದನು.

ಈ ಡಂಗುರವನ್ನು ಕೇಳಿ ಪ್ರಪಂಚದ ಮೇಲೆ ಎಲ್ಲೆಲ್ಲಿದ್ದ ದೇವತೆಗಳೆಲ್ಲಾ ಕಾಶೀ ವಿಶ್ವನಾಥನ ಬಳಿಗೆ ಬಂದರು. ಅವರೊಂದಿಗೆ ಶಿವನು, "ಮೊದಲು ನನ್ನನ್ನು ಕೇಳಿದ ಮೇಲೆಯೇ ಬ್ರಹ್ಮನು ದಿವೋದಾಸನಿಗೆ ವರವನ್ನು ಕೊಟ್ಟನು. ಆದುದರಿಂದ ನಾವೆಲ್ಲರೂ ಮಂದರ ಪರ್ವತಕ್ಕೆ ಹೋಗಿಬಿಡೋಣ" ಎಂದನು.

ಆಮೇಲೆ ಪ್ರಪಂಚದಲ್ಲೆಲ್ಲಿಯೂ ದೇವತೆಗಳೇ ಇಲ್ಲದೆ ಹೋದರು. ದೇವಾಲಯಗಳಲ್ಲೆಲ್ಲಾ ಪೂಜೆಗಳೇ ನಿಂತುಹೋದುವು. ದಿವೋದಾಸನು ಕಾಶಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಎಂಟುಸಾವಿರ ವರ್ಷಗಳವರೆಗೆ ಯಾವ ತೊಂದರೆಯೂ ಇಲ್ಲದೆ ಪರಿಪಾಲಿಸಿಕೊಂಡಿದ್ದನು. ಭೂಮಿಯನ್ನು ಆಶ್ರಯಿಸಿಕೊಂಡು ಅದೇ ತಮ್ಮ ಜನ್ಮಭೂಮಿಯೆಂದು ಕೊಂಡಿದ್ದ ಚಿಲ್ಲರೆ ದೇವತೆಗಳೂ ದಾನವರೂ ದಿವೋದಾಸನ ಆಸ್ಥಾನದಲ್ಲಿ ಸೇವೆ ಮಾಡುತ್ತಿದ್ದರು.

ಈ ರೀತಿಯಾಗಿ ಭೂಲೋಕದಲ್ಲಿ ತಮ್ಮ ಆಟ ಕಟ್ಟಿಹೋಯಿತೆಂದು ದೇವತೆಗಳು ಮಹಾ ಬಾಧೆಗೊಳಗಾಗಿ, "ದಿವೋದಾಸನನ್ನು ಹೇಗೆ ರಾಜ್ಯ ಭ್ರಷ್ಟನಾಗುವಂತೆ ಮಾಡುವುದೋ ?" ಎಂದು ತಮ್ಮ ಗುರುವಾದ ಬೃಹಸ್ಪತಿಯನ್ನು ಕೇಳಿದರು.

"ಅಗ್ನಿಯೂ, ವಾಯುವೂ, ವರುಣನೂ ನಮ್ಮವರು ತಾನೆ ? ಅವರು ತಮ್ಮ ತಮ್ಮ ಶಕ್ತಿ



ಗಳನ್ನು ಉಪಸಂಹರಿಸಿಕೊಂಡರೆ ಭೂಮಿಯಲ್ಲಿ ಜೀವಿತವೆಲ್ಲಾ ನಿಂತುಹೋಗಿ ಬಿಡುತ್ತದೆ. ಮೊದಲು ಅಗ್ನಿಯೊಂದಿಗೆ ಸಹಾಯ ನಿರಾಕರಣೆ ಮಾಡಲು ಒಪ್ಪಿಸಿರಿ" ಎಂದು ನೊಂದ ದೇವತೆಗಳಿಗೆ ಬೃಹಸ್ಪತಿ ಹೇಳಿದನು.

ಕಾಶಿಯಲ್ಲಿ ಎಲ್ಲಿಯೂ ಬೆಂಕಿಯಿಲ್ಲದೆ ಹೋಯಿತು. ಅಡಿಗೆಗಳು ನಿಂತುವು. ದಿವೋದಾಸನಿಗೆ ಮಾತ್ರ ಬಿಸಿಲಿನ ಸಹಾಯದಿಂದ ಅಡಿಗೆ ಬೇಯಿಸಿ ಬಡಿಸಲಾಯಿತು. ಆದರೆ ಪ್ರಜೆಗಳೆಲ್ಲಾ ಗೋಳಾಡತೊಡಗಿದರು. ಈ ಕಷ್ಟವನ್ನು ನೋಡಿ ದಿವೋದಾಸನು, "ಇದು ದೇವತೆಗಳು ಸೃಷ್ಟಿಸಿದ ದುಷ್ಟತನ. ಇದಕ್ಕಾಗಿ ಯಾರೂ ಹೆದರ ಬೇಕಾಗಿಲ್ಲ. ನನ್ನ ತಪಸ್ಸಿನಿಂದ ನಿಮಗೆ ಅಗ್ನಿಯನ್ನೂ, ವಾಯುವನ್ನೂ, ಮಳೆಯನ್ನೂ ಕೊಡುತ್ತೇನೆ" ಎಂದು ಪ್ರಜೆಗಳಿಗೆ ಹೇಳಿ, ಹೇಳಿದ ಹಾಗೆಯೇ ಮಾಡಿಯೂ ತೋರಿಸಿದನು. ದೇವತೆಗಳ ಎತ್ತುಗಡೆ ಬಿದ್ದುಹೋಯಿತು.

ಆದರೆ ಶಿವನಿಗೇ ಕಾಶಿಯ ವಿಯೋಗವು ಕಷ್ಟವನ್ನುಂಟುಮಾಡಿತು. ಅವನಿಗೆ ಕೂಡಾ ದಿವೋದಾಸನ ಪರಿಪಾಲನೆಯನ್ನು ಸಾಕುಮಾಡಿಸಬೇಕೆಂದು ತೋರಿತು. ಅವನು ಅರವತ್ತನಾಲ್ಕು ಸಿದ್ಧಯೋಗಿನಿಯರನ್ನು ಕರೆದು, "ನೀವುಗಳು ಬೇರೆ ಬೇರೆ ವೇಷಗಳಿಂದ ಕಾಶೀ ನಗರಕ್ಕೆ ಹೋಗಿ ಅಲ್ಲಿರುವ ಸ್ತ್ರೀಯರ ಪಾತಿವ್ರತ್ಯವನ್ನೂ, ಪುರುಷರ ಧರ್ಮಬುದ್ಧಿಯನ್ನೂ ಕೆಡಿಸಿ ಹಾಕಿರಿ. ಹಾಗೆ ಮಾಡಿದ ಹೊರತು ದಿವೋದಾಸನ ಪತನವಾಗುವುದಿಲ್ಲ" ಎಂದು ಎಚ್ಚರಿಸಿ ಕಳುಹಿಸಿದನು.

ಸಿದ್ಧಯೋಗಿನಿಯರು ಶಿವನು ಹೇಳಿದ ಹಾಗೆಯೇ ಮಾಡತೊಡಗಿದರು. ಆದರೆ ಶಿವನು ಸಾಧಿಸಬೇಕೆಂದು ಹೇಳಿದ ಕಾರ್ಯವನ್ನು ಮಾತ್ರ ಸಾಧಿಸಲಾಗದೆ ಹೋದರು. ಅದನ್ನು ನೋಡಿ ಶಿವನು ಸೂರ್ಯನೊಂದಿಗೆ "ನೀನು ಕಾಶಿಗೆ ಹೋಗಿ ದಿವೋದಾಸನು ಧರ್ಮಭ್ರಷ್ಟನಾಗುವಂತೆ ಮಾಡಲೇಬೇಕು. ಹೇಗೆ ಬೇಕಾದರೂ ಮಾಡು" ಎಂದನು.

ಸೂರ್ಯನು ಬಗೆಬಗೆಯ ವೇಷಗಳನ್ನು ಧರಿಸಿ ಕಾಶಿಯಲ್ಲಿ ತಿರುಗುತ್ತ, ದಿವೋದಾಸನಲ್ಲಿ ಯಾವ ಧರ್ಮಲೋಪವಾದರೂ ಕಾಣುವುದೋ ಎಂದು ನೋಡತೊಡಗಿದನು. ದಿವೋದಾಸನಲ್ಲಿ ಮಾತ್ರವಲ್ಲ, ಅವನ ಪ್ರಜೆಗಳಲ್ಲಿ ಕೂಡಾ ಕಿಂಚಿತ್ತಾದರೂ ಅಧರ್ಮದ ಛಾಯೆಯನ್ನೂ ಸೂರ್ಯನು ನೋಡಲಿಲ್ಲ. ಹೊರಟ ಕೆಲಸ ಪೂರ್ತಿಯಾಗದೆ ಹಿಂದಿರುಗಲು ಇಷ್ಟವಿಲ್ಲದೆ ಸೂರ್ಯನು ಕಾಶಿಯಲ್ಲಿಯೇ ಉಳಿದುಬಿಟ್ಟನು.

ತರುವಾಯ ಶಿವನು ಬ್ರಹ್ಮನನ್ನು ಕರೆಯಿಸಿ, "ದಿವೋದಾಸನನ್ನು ಪತನಗೊಳಿಸುವಂತೆ ಯೋಗಿನಿಯರನ್ನು ಕಳುಹಿಸಿದೆನು. ಅವರ ಹಿಂದೆಯೇ ಸೂರ್ಯನನ್ನು ಕಳುಹಿಸಿದೆನು. ಅವರೆಲ್ಲರೂ ಕಾಶಿಯಲ್ಲೇ ಸಿಕ್ಕಿಕೊಂಡು ಹಿಂದಿರುಗಿ ಬಾರದೆ ಹೋಗಿರುವರು. ಇನ್ನು ನೀನೇ ಹೋಗಿ ಕೆಲಸ ಮುಗಿಸಬೇಕು" ಎಂದನು.

ಬ್ರಹ್ಮನು ಅದಕ್ಕೆ ಒಪ್ಪಿ, ವೃದ್ಧ ಬ್ರಾಹ್ಮಣನ ವೇಷದಲ್ಲಿ ಕಾಶೀ ನಗರಕ್ಕೆ ಹೋಗಿ, ಸಭೆ ನಡೆಸಿಕೊಂಡಿದ್ದ ದಿವೋದಾಸನಿಗೆ ಆಶೀರ್ವಾದ ಮಾಡಿ, "ರಾಜಾ, ನೀನು ಅನುಮತಿ ಕೊಡುವೆಯಾದರೆ ಕಾಶೀ ನಗರದಲ್ಲಿ ಯಜ್ಞಗಳನ್ನು ಮಾಡುತ್ತೇನೆ. ಆದರೆ ವಿಶ್ವೇಶ್ವರನಿಲ್ಲದ ಕಾಶಿ ಕಳೆಯಿಲ್ಲದಾಗಿದೆ. ಶಿವನನ್ನು ಬರಿಸಿದರೆ ಚೆನ್ನಾಗಿರುತ್ತದೆ" ಎಂದನು.

ಶಿವನನ್ನು ಕರೆಯಿಸುವುದನ್ನು ಕುರಿತು ದಿವೋದಾಸನು ಏನೂ ಹೇಳಲಿಲ್ಲ. ಅವನು ಸುಮ್ಮನಿದ್ದರೂ ಬ್ರಹ್ಮನು ಕಾಶಿಯಲ್ಲಿ ಹತ್ತು ಅಶ್ವಮೇಧ ಯಾಗಗಳನ್ನು ಮಾಡಿ ಅಲ್ಲಿಯೇ ಇದ್ದುಬಿಟ್ಟನು.






# ಶರೀರದ ಬೆಲೆ

ಹಿಂದೆ ಉದಯನಗರದಲ್ಲಿ ರಾಜನಾಗಿದ್ದ ಉದಯ ಸೇನನು ದೊಡ್ಡ ಧರ್ಮಾತ್ಮನಾಗಿದ್ದನು. ಅವನು ತನ್ನ ರಾಜ್ಯದಲ್ಲಿ ಎಲ್ಲಾ ವೃತ್ತಿಗಳವರಿಗೂ ಸುಖ ವಾಗಿ ಜೀವಿತವು ಸಾಗುವಂತೆ, ಅನೇಕ ದಾರಿಗಳನ್ನೂ, ಸೌಕರ್ಯಗಳನ್ನೂ ಏರ್ಪಡಿಸುವಂತಹ ಶಾಸನಗಳನ್ನು ಮಾಡಿದ್ದನು. ಎಲ್ಲರಿಗೂ ಅವರವರ ಯೋಗ್ಯತೆಗೆ ತಕ್ಕಂತಹ ಕೆಲಸಗಳು ಇರುತ್ತಿದ್ದುವು. ಯಾರಿಗೂ ದಾರಿದ್ರ್ಯವೆಂಬ ಕಠಿಣ ಕಷ್ಟವಿರಲಿಲ್ಲ. ಯಾವ ಕೆಲಸವನ್ನೂ ಮಾಡಲಾಗದ ಮುದುಕ ಮುದುಕಿ ಯರೂ, ವಿಕಲಾಂಗರೂ ಅಲ್ಲಿ ಇಲ್ಲಿ ಭಿಕ್ಷೆ ಬೇಡು ವುದು ಕಾಣುತ್ತಿತ್ತು.

ಆ ದೇಶದ ಭಿಕ್ಷುಕರಲ್ಲಿ ಒಬ್ಬ ಯುವಕನಿದ್ದನು. ಅವನು ಬುದ್ಧಿ ತಿಳಿದಂದಿನಿಂದಲೂ ಭಿಕ್ಷೆ ಎತ್ತುವು ದನ್ನೇ ವೃತ್ತಿಯಾಗಿ ಮಾಡಿಕೊಂಡಿದ್ದನು. ದೇಶ ದೊಳಗೆ ರಾಜನ ಕಾರ್ಯಗಳಿಂದಾಗಿ ಭಿಕ್ಷುಕರ ಸಂಖ್ಯೆ ಕ್ರಮವಾಗಿ ತಗ್ಗಿ ಹೋಗುವಾಗ, ಅವನಿಗೆ ತನ್ನ ವೃತ್ತಿ ನಡೆಸಿಕೊಳ್ಳಲು ಕಷ್ಟವಾಗತೊಡಗಿತು.

ಒಂದು ದಿನ ಅವನಿಗೆ ಬೆಳಗ್ಗಿನಿಂದ ಮಧ್ಯಾಹ್ನದ ವರೆಗೆ ತಿರುಗಿದರೂ ಯಾರೂ ಭಿಕ್ಷೆ ಹಾಕುವವರು ಇಲ್ಲದೆ ಹೋದರು. ಹಸಿವೆ ಹೊಟ್ಟೆಯೊಳಗೆ ಧಗ ಧಗಿಸಿಕೊಂಡಿರಲು, ನಡೆಯಲಾಗದೆ, ರಾಜಬೀದಿ ಯಲ್ಲಿದ್ದೊಂದು ಮರದ ಕೆಳಗೆ ಕುಳಿತನು. ದಾರಿ ಯಲ್ಲಿ ಹೋಗುವವರನ್ನು ನೋಡಿ ಆರ್ತನಾದದಿಂದ ಯಾಚಿಸತೊಡಗಿದನು. ಯಾರೂ ಅವನನ್ನು ಕಣ್ಣೆತ್ತಿ ನೋಡಲಿಲ್ಲ. ದೇವರ ಹೆಸರು ಹೇಳಿ ಕೂಗಿದ ರಾದರೂ ಜನರಿಗೆ ತನ್ನ ಮೇಲೆ ಕರುಣೆ ಬರುವುದೆಂದು ಕೊಂಡು ಅವನು ಗಟ್ಟಿಯಾಗಿ, "ಓ ಪರಮಾತ್ಮಾ! ಈ ದೀನನಿಗೆ ಒಂದು ಮುಷ್ಟಿ ಅನ್ನ! ಹಸಿದ ಹೊಟ್ಟೆಗೆ ಒಂದು ತುತ್ತು ಕವಳ!" ಎಂದು ಕೂಗಲು ತೊಡಗಿದನು.

ಅದಾವುದನ್ನೂ ಜನರು ಲಕ್ಷಿಸದೆ ತಮ್ಮ ಪಾಡಿಗೆ ಹೋಗುತ್ತಿದ್ದರು. ಹಸಿದು ಕೈಕಾಲು ಗೆಟ್ಟ ಯುವಕನಿಗೆ ದೇವರ ಮೇಲೆ ಕೋಪ ಬಂದಿತು.

"ಎಲೋ! ಭಗವಂತನೆಂಬ ಹೆಸರಿನವನೇ! ನೀನೆಲ್ಲಿ ಸತ್ತೆಯೋ! ಹುಟ್ಟಿಸಿದವನು ಹುಲ್ಲು ಮೇಯಿಸದಿರುವನೇ ಅನ್ನುತ್ತಾರಲ್ಲಾ? ನಿನ್ನಮ್ಮನ ಹೊಟ್ಟೆಗೆ ಬೆಂಕೀಬೀಳ!" ಎಂದು ಬಾಯಿಗೆ ಬಂದ ಹಾಗೆ ಬಯ್ಯಲು ತೊಡಗಿದನು.

ಆ ಸಮಯದಲ್ಲಿ ರಾಜನು ಕುದುರೆಯ ಮೇಲೆ ರಾಜ ಬೀದಿಯಲ್ಲಿ ಬರುತ್ತ, ಭಿಕ್ಷುಕನ ಅಪಲಾಪ ಗಳನ್ನು ಕೇಳಿ, ಕುದುರೆಯನ್ನು ನಿಲ್ಲಿಸಿ, ಇಳಿದು ಅವನ ಬಳಿಗೆ ಹೋಗಿ, "ಯಾರನ್ನು ಹೀಗೆ ಬಯ್ಯುವಿ ? ಏಕೆ ?" ಎಂದು ಕೇಳಿದನು.

"ಮತ್ತೆ ಯಾರನ್ನು ? ಪಾಪಗಳ ಭೈರವನಾದ ಆ ಭಗವಂತನೆಂಬವನನ್ನೇ !" ಎಂದನು ಭಿಕ್ಷುಕ ಯುವಕ.

"ಭಗವಂತನನ್ನು ಪೂಜಿಸುತ್ತಾರೆಯೇ ಹೊರತು ಬಯ್ಯುತ್ತಾರೆಯೇ ?" ಎಂದನು ರಾಜ.

"ಬಯ್ಯದೆ ಮತ್ತೆ ಯಾರನ್ನು ಬಯ್ಯಲಿ ?" ಎನ್ನಲು, "ನಿನಗೇನು ದ್ರೋಹ ಮಾಡಿದ್ದಾನೆ ಭಗವಂತ ?" ಎಂದನು ರಾಜ.

"ಇದಕ್ಕಿಂತ ದೊಡ್ಡ ದ್ರೋಹವೇನಿದೆ ? ಬೆಳಗ್ಗಿನಿಂದ ಬೀದಿ ಬೀದಿ ಸುತ್ತುತ್ತಿದ್ದೇನೆ. ಒಂದು ಚಿಕ್ಕಾಸಿನ ಭಿಕ್ಷೆ ಕೂಡಾ ಸಿಗಲಿಲ್ಲ. ಈಗ ನಡೆಯಲಿಕ್ಕೂ ಕೊಡುವುದಿಲ್ಲ. ಇದು ಭಗವಂತನ ದ್ರೋಹವಲ್ಲವೇ ?" ಎಂದನು ಯುವಕ.

"ಎಲೋ, ನಿನಗೆ ಹಣ ಬೇಕಾದರೆ ನಾನು ಕೊಡುತ್ತೇನೆ. ನಾನು ಈ ದೇಶದ ರಾಜನು. ನಿನ್ನ ಒಂದು ಕೈಯನ್ನು ನನಗೆ ಕೊಟ್ಟುಬಿಡು. ಸಾವಿರ ರೂಪಾಯಿ ಕೊಡುತ್ತೇನೆ. ನಿನ್ನ ಕಾಲುಗಳಲ್ಲಿ ಒಂದನ್ನು ಕೊಟ್ಟರೆ ಎರಡು ಸಾವಿರ ಕೊಡುತ್ತೇನೆ. ನಿನ್ನ ಕಣ್ಣುಗಳನ್ನು ಕೊಡುವಿಯಾದರೆ ಅರ್ಧ ರಾಜ್ಯವನ್ನೇ ಕೊಡುತ್ತೇನೆ" ಎಂದನು ರಾಜ.

"ನಾನು ಹಾಗೆಲ್ಲಾ ಏಕೆ ಕೊಡಬೇಕು ? ನಿಮ್ಮ ಹಣ ನನಗೇನೂ ಬೇಡ. ಅದೆಲ್ಲಾ ಆಗದ ಹೋಗದ ಹರಟೆ." ಎಂದನು ಯುವಕ ಭಿಕ್ಷುಕ.

"ಹಾಗಾದರೆ ನೀನು ತುಂಬಾ ಭಾಗ್ಯವಂತನಾಗಿರುವೆ ಅನ್ನು ! ನಿನಗೆ ಸಾವಿರ ರೂಪಾಯಿ ಬೆಲೆ ಬಾಳುವುದಕ್ಕಿಂತ ಹೆಚ್ಚಿನ ಬೆಲೆಯ ಕೈಯೂ, ಎರಡು ಸಾವಿರವನ್ನು ಮೀರಿಸುವಂತಹ ಕಾಲೂ, ಅರ್ಧ ರಾಜ್ಯಕ್ಕಿಂತಲೂ ಹೆಚ್ಚಾಗಿ ತೋರುವ ಕಣ್ಣುಗಳೂ ಇವೆಯೆಂದಾಯಿತು. ಅವುಗಳನ್ನೆಲ್ಲ ಕೊಟ್ಟಿರುವ ಭಗವಂತನನ್ನು ಪೂಜಿಸುವುದಕ್ಕೆ ಬದಲಾಗಿ ಬೈದುಕೊಂಡು ಇಲ್ಲಿರುವೆಯಾ ? ಏಳಯ್ಯಾ ! ಪಶುವಿಗಿಂತ ಹೀನನೋ ನೀನು ? ದೇವರು ಕೊಟ್ಟ ಬೆಲೆ ಬಾಳುವ ಕೈ, ಕಾಲು, ಕಣ್ಣುಗಳನ್ನು ಉಪಯೋಗಿಸಿ ಹೊಟ್ಟೆ ತುಂಬಿಸಿಕೋ. ಭಿಕ್ಷೆ ಎತ್ತಬೇಡ ! ಮನುಷ್ಯನಾಗಿ ಬಾಳು ! ಏಳು, ನಡೆ !" ಎಂದು ಹೇಳಿ ರಾಜನು ಹೊರಟುಹೋದನು.

ಅಂದಿನಿಂದ ಆ ಯುವಕನು ಬೀದಿ ಬೀದಿ ತಿರುಗಿ ಭಿಕ್ಷೆಯೆತ್ತುವುದನ್ನು ಬಿಟ್ಟು, ಶರೀರ ಶ್ರಮ ಮಾಡಿಕೊಂಡು ಬದುಕಲು ಪಳಗಿದನು.





# ಕುಬ್ಜಮಾಂತ್ರಿಕ

ಒಂದು ಊರಿನಲ್ಲಿ ಶೌರಿರಾಜನಿಗೆ ಇಪ್ಪತ್ನಾಲ್ಕು ವರ್ಷ ಪ್ರಾಯವಾಗಿತ್ತು. ಅವನಿಗೆ ಆಸ್ತಿಪಾಸ್ತಿಗಳೇನೂ ಇಲ್ಲದೆ ಹೋದರೂ, ಕಚೇರಿಯಲ್ಲಿ ಒಳ್ಳೆಯ ಉದ್ಯೋಗವೊಂದಿದ್ದಿತು. ಖರ್ಚಿಗೆ ಯಥೇಷ್ಟವಾಗುವಷ್ಟು ಸಂಬಳವೂ ಸಿಗುತ್ತಿತ್ತು.

ಒಂದುಸಾರಿ ಅವನು ಕಚೇರಿಯ ಕೆಲಸದ ಮೇಲೆ ಊರ ಹೊರಗಿನ ಒಂದು ಗ್ರಾಮಕ್ಕೆ ಹೋಗಿ, ಕತ್ತಲೆಯ ಹೊತ್ತಿಗೆ ಮನೆಯ ಕಡೆಗೆ ಹಿಂದಿರುಗಿದನು.

ಆ ಸಮಯದಲ್ಲಿ ಬೀದಿಯ ಜಗಲಿಯಲ್ಲಿ ಕುಳಿತಿದ್ದ ಅವನ ಮನೆ ಕೆಲಸದವಳೊಬ್ಬಳು, ಅವನ ಹತ್ತಿರ ಬಂದು, ವೀಣಾವತಿ ಹೇಳಿದ್ದ ಮಾತನ್ನು ಹೇಳಿದಳು. ಬೆಟ್ಟದ ಮೇಲಿರುವ ದೇವಾಲಯಕ್ಕೆ ಶೌರಿರಾಜನನ್ನು ಬರ ಹೇಳಿದ್ದಳು ಆ ವೀಣಾವತಿ.

ತಂದೆತಾಯಿಗಳಿಗೆ ಒಬ್ಬಳೇ ಮಗಳಾಗಿದ್ದಳು ವೀಣಾವತಿ. ಅವಳಿರುವ ಮನೆ ಶೌರಿರಾಜನ ಮನೆಯ ಹತ್ತಿರದಲ್ಲೇ ಇತ್ತು. ಶೌರಿರಾಜನೊಂದಿಗೆ ವೀಣಾವತಿಯ ವಿವಾಹಕ್ಕೆ ಅವಳ ತಂದೆ ಎಂದೋ ಅಂಗೀಕಾರ ತಿಳಿಸಿದ್ದನು. ಹೇಳಬೇಕಾದ ಮುಖ್ಯ ವಿಷಯವೇನಾದರೂ ಇದ್ದರೆ, ಮನೆಯಲ್ಲೇ ಹೇಳಬಿಡಬಹುದಿತ್ತು. ದೇವಾಲಯಕ್ಕೆ ಏಕೆ ಬರ ಹೇಳಿದಳೋ? ಇಂತಹ ಸಣ್ಣ ಆಶ್ಚರ್ಯದೊಂದಿಗೆ ಶೌರಿರಾಜನು ಬೆಟ್ಟದ ದೇವಾಲಯಕ್ಕೆ ಹೊರಟನು.

ಬೆಟ್ಟದ ಮೇಲೊಂದು ಬಂಡೆಗಲ್ಲಿನ ಮೇಲೆ ವೀಣಾವತಿ ಕುಳಿತಿದ್ದಳು. ಶೌರಿರಾಜನು ಬರುವುದನ್ನು ಅಷ್ಟು ದೂರದಿಂದ ನೋಡುತ್ತಲೇ, ಅವಳು ಎದ್ದು ಅವನಿಗಿದಿರಾಗಿ ಬಂದಳು.

ಶೌರಿರಾಜನು ನಗುತ್ತ, "ಅದೇನು ಅಷ್ಟೊಂದು ಮುಖ್ಯ ವಿಷಯ ? ನಿನ್ನ ಅಪ್ಪ ನಮ್ಮ ಮದುವೆಗೆ ಬೇಗನೇ ಮುಹೂರ್ತ ನಿಶ್ಚಯ ಮಾಡಿದರೇನು ?" ಎಂದು ಕೇಳಿದನು.

ವೀಣಾವತಿ ಉಕ್ಕಿಬರುವ ದುಃಖವನ್ನು ತಡೆದುಕೊಳ್ಳುತ್ತ, "ಹುಂ, ಇಟ್ಟಿದ್ದಾರೆ ಮುಹೂರ್ತ. ನಾಳೆ ಒಂದೇ ದಿನ, ನಾಡಿದ್ದೇ ನನ್ನ ಮದುವೆಯ ಮುಹೂರ್ತ ದಿನ. ಆದರೆ ಮದುಮಗನು ನೀನು ಅಲ್ಲ !" ಎಂದಳು.

ಶೌರಿರಾಜನು ಬೆರಗಾಗಿ "ಏಕೆ ? ಏನು ನಡೆಯಿತು ?" ಎಂದು ಕೇಳಿದನು.

ಎಂ. ಕೆ. ಈಶ್ವರರಾವ್



ವೀಣಾವತಿ ನಡೆದ ಸಂಗತಿಯನ್ನೆಲ್ಲಾ ಅವನೊಂದಿಗೆ ಹೇಳಿದಳು. ನಿನ್ನೆ ಅಕಸ್ಮಾತ್ತಾಗಿ ಅವಳ ತಂದೆಯ ಚಿಕ್ಕಂದಿನ ಸ್ನೇಹಿತನೊಬ್ಬನು ಬಂದುಬಿಟ್ಟನು. ಅವನು ಸಮುದ್ರ ವ್ಯಾಪಾರದಲ್ಲಿ ಲಕ್ಷಗಟ್ಟಲೆ ಧನ ಸಂಪಾದನೆ ಮಾಡಿದ ದೊಡ್ಡವನು. ಅವನೊಂದಿಗೆ ಬಂದಿದ್ದ ಅವನ ಮಗನಾದ ಸೀತಾಪತಿಗೆ ವೀಣಾವತಿ ತುಂಬ ಹಿಡಿಸಿಬಿಟ್ಟಳಂತೆ. ಸಮೀಪದಲ್ಲೇ ಒಳ್ಳೆಯ ಮುಹೂರ್ತವೂ ಇದ್ದುದರಿಂದ ಅವನೊಂದಿಗೆ ವೀಣಾವತಿಯ ಮದುವೆ ಜರುಗಿಸಲು ತಂದೆ ತನ್ನ ಸ್ನೇಹಿತನಿಗೆ ಮಾತು ಕೊಟ್ಟಾಗಿದೆ. ಈ ವಿಷಯದಲ್ಲಿ ಅವಳನ್ನು ಒಂದು ಮಾತು ಕೇಳಲೂ ಇಲ್ಲ.

ಅವರು ಹೊರಟು ಹೋದ ಮೇಲೆ ವೀಣಾವತಿ ತಂದೆಯೊಂದಿಗೆ ತನ್ನ ಅಭ್ಯಂತರವನ್ನು ಹೇಳಿಬಿಟ್ಟಳು. ಅದಕ್ಕೆ ತಂದೆ ಕೋಪಗೊಂಡು, "ನೀನು ಬಾಯಿ ಮುಚ್ಚಿಕೊಂಡಿರಬೇಕು. ಆ ಶೌರಿರಾಜನಿಗೆ ಸ್ವಂತ ಆಸ್ತಿ ಎನ್ನಲು ಚಿಕ್ಕಾಸಿನ ಜಾಗೆಯೂ ಇಲ್ಲ. ಆದೊಂದು ಕಚೇರಿಯ ಕೆಲಸವನ್ನೂ ನಂಬುವಂತಿಲ್ಲ. ಥಕ್ಕನೆ ಕೆಲಸ ಕಳೆದುಕೊಂಡವರನ್ನು ನಾನು ಬಲ್ಲೆನು. ಈ ಸ್ನೇಹಿತನಿಗೆ ಲಕ್ಷಗಟ್ಟಲೆ ಆಸ್ತಿಯಿದೆ. ಈ ಮದುವೆಗೆ ನೀನು ಒಲ್ಲೆನೆಂದರೆ ನಾನು ದೇಶಾಂತರಕ್ಕೆ ಹೋಗಿಬಿಡುತ್ತೇನೆ. ಇನ್ನೇನೂ ಮಾತಾಡದೆ ಸುಮ್ಮನಿರು" ಎಂದನು.

ಅದನ್ನೆಲ್ಲ ಕೇಳಿ ಶೌರಿರಾಜನು ಆವೇಶ ತಂದುಕೊಂಡು, "ಹಾಗೇನು! ನಾನೇ ಬಂದು ನಿನ್ನ ಅಪ್ಪನೊಂದಿಗೆ ಮಾತಾಡುತ್ತೇನೆ" ಎಂದನು.

ವೀಣಾವತಿ ಬೇಸರದಿಂದ ತಲೆಯಾಡಿಸುತ್ತ, "ಆ ಕೆಲಸ ಮಾತ್ರ ಮಾಡಬೇಡ. ಅಪ್ಪನಿಗೆ ಕೋಪ ಬಂದರೆ ಹುಚ್ಚು ಹಿಡಿದವರ ಹಾಗಾಗುತ್ತಾರೆ. ಗಲಾಟೆಯಾದರೆ ನಿಜಕ್ಕೂ ಊರು ಬಿಟ್ಟು ಹೋಗಿಬಿಡುವಂಥವರೇ." ಎಂದು ಮತ್ತೆ ಅಲ್ಲಿ ನಿಲ್ಲದೆ ಮನೆಯ ಕಡೆಗೆ ಹೊರಟಳು.

ಹೀಗಾದುದನ್ನು ನೋಡಿ ಶೌರಿರಾಜನು ತುಂಬಾ ಕಳವಳಪಟ್ಟನು. ರಾತ್ರಿಯಲ್ಲಿ ಮನೆಗೆ ಹೋಗಲಿಕ್ಕೂ ಅವನಿಗೆ ಮನಸ್ಸಾಗಲಿಲ್ಲ. ಬೆಟ್ಟದ ಮೇಲಿನ ಒಂದು ಬಂಡೆಯ ಮೇಲೆ ಕುಳಿತುಕೊಂಡು ಯೋಚಿಸತೊಡಗಿದನು. ಸ್ವಲ್ಪ ಹೊತ್ತಿಗೆ ಏನೋ ಒಂದು ನಿಶ್ಚಯಕ್ಕೆ ಬಂದವನ ಹಾಗೆ ಎದ್ದು ಬೆಟ್ಟದ ಆಚೆಯ ಬದಿಗೆ ಹೊರಟನು.

ಬೆಟ್ಟದಾಚೆಗೆ ಇಳಿದರೆ ನಾಲ್ಕೈದು ಹರದಾರಿಯವರೆಗೆ ದೊಡ್ಡ ಅರಣ್ಯವಿದ್ದಿತು. ಅಲ್ಲಿ ಆಟವಿಕರು ತಿರುಗಾಡುತ್ತಿರುವರೆಂದೂ, ಅವರು ಬಹಳ ಕ್ರೂರ ಗುಣದವರೆಂದೂ ಅನೇಕರು ಹೇಳುವುದನ್ನು ಕೇಳಿದ್ದನು. ಯಾರೂ ಆ ಕಡೆಗೆ ಹೋಗುತ್ತಿರಲಿಲ್ಲ. ಶೌರಿರಾಜನು ಬೆಟ್ಟವಿಳಿದು ಆ ಕಡೆಗೆ ಸ್ವಲ್ಪ ದೂರ ಹೋದನು. ಅಷ್ಟರಲ್ಲಿ "ಯಾರದು?" ಎಂಬ ಶಬ್ದ ಕೇಳಿ ಅಲ್ಲಿಯೇ ನಿಂತನು.

ಇಬ್ಬರು ಅಡವಿ ಜಾತಿಯವರು ಈಟಿಗಳನ್ನು ಝಳಿಪಿಸುತ್ತ ಅವನ ಮುಂದೆ ಬಂದು, "ನೀನು ಹೀಗೆ ಎಲ್ಲಿಗೆ ಹೋಗುವುದು? ಈ ರಾತ್ರಿಯ ಹೊತ್ತಿನಲ್ಲಿ ಅರಣ್ಯದಲ್ಲಿ ನಿನಗೇನು ಕೆಲಸ?" ಎಂದು ಕೇಳಿದರು.

ಶೌರಿರಾಜನು ಮೊದಲೊಂದು ಕ್ಷಣಕಾಲ ಹೆದರಿ, ಅಷ್ಟರೊಳಗೆ ಧೈರ್ಯ ತಂದುಕೊಂಡು, "ಈ ಮಹಾರಣ್ಯದಲ್ಲಿರುವ ಯಾವ ಹುಲಿಯ ಬಾಯಿಗೋ ಬೀಳೋಣವೆಂತಲೇ ಬಂದಿದ್ದೇನೆ. ನಾನು ತೀರ ಲಾರದ ಕಷ್ಟದಲ್ಲಿ ಸಿಕ್ಕಿಬಿದ್ದು ಬದುಕುವುದೇ ಬೇಡ ವೆನಿಸಿದೆ" ಎಂದನು.

ಆ ಮಾತು ಕೇಳಿ ಅಡವಿ ಜಾತಿಯವರಿಬ್ಬರೂ ಸ್ವಲ್ಪ ಆಚೆಗೆ ಹೋಗಿ, ತಮ್ಮೊಳಗೇನೋ ಮಾತಾಡಿ ಕೊಂಡು, ಮತ್ತೆ ಶೌರಿರಾಜನ ಬಳಿಗೆ ಬಂದು. "ಕಷ್ಟದಲ್ಲಿರುವ ಮನುಷ್ಯರೆಂದರೆ ನಮಗೆ ಕರುಣೆ ಬರುತ್ತದೆ. ಇಲ್ಲಿಯ ಪಿಶಾಚಿ ದಿಬ್ಬದ ಮೇಲಿರುವ ಪಿಶಾಚಿಗಳಿಂದ ಅನೇಕ ಮಂದಿ ಆಟವಿಕರು ಅನೇಕ ಬಗೆಯ ಕಷ್ಟಗಳಿಗೆ ಒಳಗಾದಾಗ, ಒಬ್ಬ ಕುಳ್ಳನಾದ ಮಾಂತ್ರಿಕನು ಬಂದು ನಮ್ಮನ್ನು ರಕ್ಷಿಸುತ್ತಾನೆ. ಈಗ ಆತನಿರುವುದು ಪಿಶಾಚಿ ದಿಬ್ಬದ ಮೇಲೆಯೇ. ನಿನ್ನನ್ನು ಹಿಡಿದು ಪೀಡಿಸುವ ಕಷ್ಟವೇನೆಂದು ಆ ಕುಳ್ಳ ಮಂತ್ರವಾದಿಯೊಂದಿಗೆ ಹೇಳಿಕೋ" ಎಂದು ಹೇಳಿ ಅವನನ್ನು ಕರೆದುಕೊಂಡು ಕುಬ್ಜ ಮಾಂತ್ರಿಕನ ಹತ್ತಿರ ಹೋದರು.

ಆ ಕುಬ್ಜ ಮಾಂತ್ರಿಕನು ದಿಬ್ಬದ ಮೇಲೆ ಸಣ್ಣ ಕೊಟ್ಟಿಗೆಯೊಳಗಿನಿಂದ ಹೊರಗೆ ಉರಿಯುವ ಅಗ್ನಿಷ್ಟಿಕೆಯ ಮುಂದೆ ಬಂದು ಕುಳಿತಿದ್ದನು. ಅಲ್ಲಿಗೆ ಬಂದ ಶೌರಿರಾಜನನ್ನು ನೋಡಿದ ಕೂಡಲೇ ಅವನು, "ಹನ್ನೆರಡು ವರುಷಗಳ ಮೇಲೆ ನನ್ನನ್ನು ಹುಡುಕುತ್ತಾ ಬಂದ ಮನುಷ್ಯನಿವನು! ಯಾರೋ ನೀನು?" ಎಂದು ಕೀಚು ಕಂಠ ದಿಂದ ಕೇಳಿದನು.

"ಮಂತ್ರದ ಮಾವಯ್ಯಾ, ದೊಡ್ಡ ಕಷ್ಟ ಬಂದು ಈ ರಾತ್ರಿಯ ಹೊತ್ತಿನಲ್ಲಿ ನಿಮ್ಮನ್ನು ಹುಡುಕುತ್ತ





"ಬಂದೆನು" ಎಂದು ಶೌರಿರಾಜನು ವಿನಯದಿಂದ ಬಾಗಿ ಕುಬ್ಜನಿಗೆ ಕೈಮುಗಿದು ಕುಳಿತನು.

ಮಾಂತ್ರಿಕನು ಅಗ್ಗಿಷ್ಟಿಕೆಯಿಂದ ಧಗಧಗ ಉರಿಯುವ ಒಂದು ಕಟ್ಟಿಗೆಯನ್ನು ತೆಗೆದು, ಅದರ ಬೆಳಕಿನಲ್ಲಿ ಶೌರಿರಾಜನ ಮುಖವನ್ನು ಪರೀಕ್ಷಿಸಿ ನೋಡಿ, "ಹೂಂ, ಹೇಳು, ನಿನಗೆ ಬಂದ ಕಷ್ಟ ಏನದು ?" ಎಂದು ಕೇಳಿದನು.

ಶೌರಿರಾಜನು ತನಗೆ ಬಂದ ಕಷ್ಟವನ್ನೂ ಅದರಿಂದ ಬಂದ ದುಃಖವನ್ನೂ, ವೈರಾಗ್ಯವನ್ನೂ ಹೇಳಿ, "ವೀಣಾವತಿಯೊಂದಿಗೆ ನನ್ನ ಮದುವೆ ನಡೆಯದೆ ಹೋದರೆ, ನನಗೆ ಈ ಪಿಶಾಚಿಗಳ ದಿಬ್ಬವೇ ಗತಿ ! ನಾಳೆಯಲ್ಲ, ನಾಡಿದ್ದು ಬೇರೊಬ್ಬನೊಂದಿಗೆ ನಡೆಯಲಿರುವ ವೀಣಾವತಿಯ ಮದುವೆ ನಿಂತು ಹೋಗಬೇಕು. ಅವಳ ತಂದೆ ನನ್ನೊಂದಿಗೆ ಅವಳ ಮದುವೆ ಮಾಡಿಸಬೇಕು. ಇದಕ್ಕೇನಾದರೂ ಮಂತ್ರವೋ ತಂತ್ರವೋ ಉಪಯೋಗಿಸಿ ನನಗೆ ಸಹಾಯ ಮಾಡಲು ನಿಮಗೆ ಸಾಧ್ಯವೇ ? ನಿಮ್ಮನ್ನೇ ನಂಬಿ ಬಂದಿದ್ದೇನೆ" ಎಂದು ಹೇಳಿದನು.

ಮರುಕ್ಷಣವೇ ಕುಬ್ಜ ಮಾಂತ್ರಿಕನು ಕಣಕಣಿಸಿ ಕೊಂಡಿರುವ ಅಗ್ಗಿಷ್ಟಿಕೆಯ ಕೆಂಡದಲ್ಲಿ ಕೈಯನ್ನಿಟ್ಟನು. ಕೂಡಲೇ ನೀರು ಹಾಕಿದ ಹಾಗೆ ಅಗ್ಗಿಷ್ಟಿಕೆ ಆರಿಹೋಗಿ, ಎಲ್ಲವೂ ಕಪ್ಪಗಿನ ಮಸಿಗಟ್ಟಿಗಳಾದುವು.

ಮಾಂತ್ರಿಕನು ಒಂದು ಕರಿಯನ್ನು ತೆಗೆದುಕೊಂಡು ತನ್ನ ನೊಸಲಿಗೆ ಅದನ್ನು ಒತ್ತಿ ಹಿಡಿದು "ನೀನು ಮದುವೆ ಮಾಡಿಕೊಳ್ಳಬೇಕೆಂದಿರುವ ಹುಡುಗಿ, ಬೆಲ್ಲದ ಅಚ್ಚಿನ ಹಾಗೆ ಈ ಕರಿಗಡ್ಡೆಯನ್ನು ಅಗಿದು ನುಂಗಿಬಿಡಲಿ. ಅಳಿಯನೇ, ಇನ್ನು ಹೋಗಿಬಾರಪ್ಪಾ" ಎಂದು ಆ ಕರಿಯನ್ನು ಅವನಿಗೆ ಕೊಟ್ಟನು.

ಶೌರಿರಾಜನು ಏನೋ ಕೇಳಬೇಕೆಂದು ಬಾಯಿ ತೆರೆಯಲು, ಕುಬ್ಜ ಮಾಂತ್ರಿಕನು ಅಲ್ಲಿಂದೆದ್ದು ಕೊಟ್ಟಿಗೆಯೊಳಗೆ ಹೋಗುತ್ತ, "ಬೇಡದ ಪ್ರಶ್ನೆಗಳನ್ನು ಕೇಳಿ ನನ್ನನ್ನು ಬೇಸರಪಡಿಸಬೇಡ. ಪ್ರಿಯ ಅಳಿಯ ರಾಜಾ, ಹೋಗಿಬಿಡು" ಎಂದನು.

ಶೌರಿರಾಜನು ಅವನು ಕೊಟ್ಟ ಕರಿ ತುಂಡನ್ನು ತೆಗೆದುಕೊಂಡು ಮನೆಗೆ ಹಿಂದಿರುಗಿ ಬಂದನು. ತರುವಾಯ ವೀಣಾವತಿಯ ಮನೆಗೆ ಹೋಗಿ, ಅವಳು ಮಲಗುವ ಕೋಣೆಯ ಕಿಟಕಿಯ ಹೊರಗೆ ನಿಂತು, ಬಾಗಿಲನ್ನು ಮೆಲ್ಲನೆ ತಟ್ಟಿದನು. ವೀಣಾವತಿ ಕೂಡಲೇ ಕಿಟಕಿಯ ಬಾಗಿಲು ತೆರೆದಳು.

ಶೌರಿರಾಜನು ಸಣ್ಣ ದನಿಯಲ್ಲಿ, "ನನ್ನನ್ನು ಏನೂ ಕೇಳದೆ ಈ ಕರಿ ತುಂಡನ್ನು ಅಗಿದು ನುಂಗು" ಎಂದು ಕರಿಯನ್ನು ಅವಳಿಗೆ ಕೊಟ್ಟನು.

ವೀಣಾವತಿ ಸರಿ ಎಂಬಂತೆ ತಲೆಯಾಡಿಸಿದಳು. ಶೌರಿರಾಜನು ತೃಪ್ತಿಯಿಂದ ತನ್ನ ಮನೆಗೆ ಹಿಂದಿರುಗಿ ಹೋಗಿಬಿಟ್ಟನು.

ಬೆಳಗಾದ ಮೇಲೆ ವೀಣಾವತಿಯನ್ನು ಎಬ್ಬಿಸಲು ಬಂದ ಹೆಂಗುಸರು ಅವಳನ್ನು ನೋಡುತ್ತಲೇ

ಕಿಟ್ಟನೆ ಕಿರಿಚಿಕೊಂಡರು. ಬಂಗಾರದ ಬಣ್ಣದ ಅವಳ ಶರೀರ ಛಾಯೆ ಕರ್‍ರಗಾಗಿ ಕಾಣುತ್ತಿತ್ತು.

ಈ ವಿಚಿತ್ರವು ಮರು ಕ್ಷಣಾನುಕ್ಷಣಗಳಲ್ಲಿ ಊರೆಲ್ಲಾ ಹರಡಿ ಹೋಯಿತು. ವರನ ಕಡೆಯವರು ಈ ವಾರ್ತೆ ಕೇಳಿ ವೀಣಾವತಿಯನ್ನು ನೋಡಲು ಬಂದು, "ಇದೇನು ವಿಚಿತ್ರ! ಇಂಥಾ ಹುಡುಗಿಯನ್ನು ಮದುವೆ ಮಾಡಿಕೊಳ್ಳುವುದುಂಟೆ? ನಮಗೆ ಬೇಡಪ್ಪ! ಇದೇನೋ ಬಣ್ಣ ಬದಲಾಯಿಸುವ ಭೂತ ಲಕ್ಷಣವೇ ನಿಜ!" ಎಂದು ತಿರುಗಿ ನೋಡದೆ ಹೊರಟು ಹೋದರು.

ವೀಣಾವತಿಯ ತಂದೆ ನಿರಾಶೆಯಿಂದ, ಅವಮಾನ ತಾಳಲಾಗದೆ ತಲೆ ಹಿಡಿದುಕೊಂಡು ಕುಳಿತನು. ಹೀಗೇಕಾಯಿತೆಂದು ಎಷ್ಟು ಆಲೋಚನೆ ಮಾಡಿದರೂ ಅವನಿಗೆ ಅರ್ಥವಾಗಲಿಲ್ಲ. ಇನ್ನು ಮೇಲೆ ಎಷ್ಟು ವರದಕ್ಷಿಣೆ ಸುರಿದರೂ ಇಂಥಾ ಹುಡುಗಿಗೆ ಮದುವೆ ಮಾಡಲು ಈ ಜನ್ಮದಲ್ಲಿ ಸಾಧ್ಯವಿಲ್ಲ!

ಆಗ ಕಚೇರಿಗೆ ಹೋಗುತ್ತಿದ್ದ ಶೌರಿರಾಜನು ಅವನ ಕಣ್ಣಿಗೆ ಬಿದ್ದನು. "ಇಲ್ಲಿ ಬಾರಪ್ಪಾ" ಎಂದು ಅವನನ್ನು ಕರೆದು ವೀಣಾವತಿಯ ತಂದೆ, "ನಿನಗೆ ನಮ್ಮ ವೀಣಾಳ ಮೇಲೆ ಪ್ರಾಣದಷ್ಟು ಪ್ರೀತಿ ಎಂದು ನನಗೆ ಗೊತ್ತು. ಆಗದವರಾರೋ ಏನೋ ಮಾಯೆಯೋ ಮಾಟವೊ ಮಾಡಿದ್ದಾರೆ. ನಾಳೆಯ ಮುಹೂರ್ತಕ್ಕೆ ಅವಳನ್ನು ಮದುವೆಯಾಗಿ ನನ್ನ ಮರ್ಯಾದೆ ಉಳಿಸುವೆಯಾ?" ಎಂದನು.

ಶೌರಿರಾಜನು ಕೂಡಲೇ, "ನಿಮ್ಮ ಇಷ್ಟದಂತೆ ನಡೆಯಲು ನನಗೆ ಯಾವ ಅಭ್ಯಂತರವೂ ಇಲ್ಲ!" ಎಂದನು.

ಅದನ್ನು ಕೇಳಿ ವೀಣಾವತಿ ಕಣ್ಣೀರು ಸುರಿಸುತ್ತ, "ಶೌರೀ! ನೋಡಿಲ್ಲಿ! ನನ್ನಂಥ ಕುರೂಪಿಯನ್ನು ಮದುವೆಯಾಗುವೆಯಾ? ಬೇಡ! ಬೇಡವೇ ಬೇಡ!" ಎಂದಳು.



ಶೌರಿರಾಜನು ಮುಗುಳು ನಗು ಸೂಸಿಕೊಂಡು, ತಲೆದೂಗಿ, ಆ ದಿನ ರಾತ್ರಿ ಕುಬ್ಜ ಮಾಂತ್ರಿಕನನ್ನು ನೋಡಲು ಹೋದನು.

ಕುಬ್ಜ ಮಾಂತ್ರಿಕನು ಶೌರಿರಾಜನನ್ನು ನೋಡಿದ ಕೂಡಲೇ, "ಏನೆಲೇ ಅಳಿಯಾ! ನಮ್ಮ ಪಥಕ ಸರಿಯಾಗಿ ನಾಟಿತಷ್ಟೆ?" ಎಂದನು.

"ನಾಟದೇ ಏನು! ಆ ಮದುಮಗನ ಕಡೆಯವರು ಹಿಂದಿರುಗಿ ನೋಡದೆ ಓಡಿಬಿಟ್ಟರು. ನಾಳೆಯೇ ವೀಣಾವತಿಯೊಂದಿಗೆ ನನ್ನ ಮದುವೆ. ನಿನ್ನೆ ನೀವು ಕೊಟ್ಟ ಕರಿತುಂಡಿಗೆ ಪರಿಹಾರ ಕೊಟ್ಟರೆ ನಿಮ್ಮ ಆಶೀರ್ವಾದ ಕೂಡಾ ಪಡೆದು ಹೋಗೋಣವೆಂದು ಬಂದೆನು" ಎಂದನು ಶೌರಿರಾಜ.

"ಪರಿಹಾರವೇತಕ್ಕೆ? ಅಂತಹುದೇನೂ ನನ್ನ ಹತ್ತಿರ ಇಲ್ಲವಲ್ಲಾ?" ಎಂದನು ಕುಬ್ಜ ಮಾಂತ್ರಿಕ.

ಶೌರಿರಾಜನು ಬೆರಗಾಗಿ "ಹಾಗಾದರೆ ವೀಣಾವತಿ ಇನ್ನು ಮೇಲೆ ಎಂದೆಂದಿಗೂ ಕರಿಗಪ್ಪು ಬಣ್ಣ

ದಲ್ಲಿಯೇ ಇರುತ್ತಾಳೇನು ?" ಎಂದು ಕೇಳಿದನು. "ಅಷ್ಟೇ ಇನ್ನು ! ಆದರೂ ಆ ಹುಡುಗಿಯ ಮೇಲೆ ನಿನಗೆ ಬಹಳ ಪ್ರೇಮವಿದೆಯಷ್ಟೆ? ಹುಡುಗಿ ಮಾರ್ಪಾಡಲಿಲ್ಲ. ಅವಳ ರಂಗು ಮಾರ್ಪಟ್ಟಿದೆ. ಅಷ್ಟೇ. ಈಗ ನೀನೂ ಆ ಕುರೂಪಿಯನ್ನು ಮಾಡಿಕೊಳ್ಳಲು ಸಂಶಯಪಡುವಿಯೆಂದಾಯಿತು. ಸರಿ ಬಿಡು. ಬೇರೆಲ್ಲಿಯಾದರೂ ಸುಂದರಿಯಾಗಿರುವ ಹುಡುಗಿಯನ್ನು ನೋಡಿ ಮದುವೆ ಮಾಡಿಕೋ" ಎಂದನು ಕುಬ್ಜ ಮಾಂತ್ರಿಕ.

ಆ ಮಾತು ಕೇಳಿ ಶೌರಿರಾಜನು ಬಹಳವಾಗಿ ನೊಂದುಕೊಳ್ಳುತ್ತ, "ವೀಣಾವತಿ ಕುರೂಪಿಯಾದುದರಿಂದ ಅವಳನ್ನು ಮದುವೆಯಾಗಲೊಲ್ಲೆನೆಂದು ತಿಳಿಯಬೇಡಿ ಮಾವಯ್ಯಾ. ಅವಳೇ ನನ್ನನ್ನು ತನಗೆ ತಕ್ಕವಳಲ್ಲವೆಂದು ದುಃಖಿಸುತ್ತಿದ್ದಾಳೆ. ನಿಮ್ಮ ಮಂತ್ರದ ಕರಿಯನ್ನು ನನಗೂ ಕೊಡಿರಿ. ಆಗ ನಾವಿಬ್ಬರೂ ಸರಿಸಮವಾಗಿರುತ್ತೇವೆ. ಅವಳಿಗೂ ಯಾವ ಬಾಧೆಯೂ ಇರದು" ಎಂದನು.

"ಎಲೋ ಶೌರಿರಾಜಾ! ನಿನ್ನ ಪ್ರೇಮ ದೊಡ್ಡದು. ಅದನ್ನು ತಿಳಿಯಲಿಕ್ಕಾಗಿಯೇ ಹಾಗೆಲ್ಲಾ ಹೇಳಿದೆ" ಎಂದು ಕುಬ್ಜ ಮಂತ್ರವಾದಿ ಪಕ್ಕದ ಬುಟ್ಟಿಯೊಳಗಿನಿಂದ ಒಂದು ಪೇರಳೇ ಹಣ್ಣನ್ನು ತೆಗೆದು ಮಂತ್ರಿಸಿ ಅವನಿಗೆ ಕೊಟ್ಟು, "ಇದನ್ನು ನಿನ್ನನ್ನು ವರಿಸುವವಳು ತಿಂದರೆ ಮೊದಲಿನ ಹಾಗೆಯೇ ಬಂಗಾರದ ಛಾಯೆಯುವಳಾಗುತ್ತಾಳೆ" ಎಂದನು.

ಶೌರಿರಾಜನು ಹಣ್ಣನ್ನು ತೆಗೆದುಕೊಂಡು, "ಮದುವೆಯಾದ ಮೇಲೆ ಒಂದು ದಿನ ನಾವಿಬ್ಬರೂ ಇಲ್ಲಿಗೆ ಬರುತ್ತೇವೆ. ನಿಮ್ಮ ಉಪಕಾರ ಮರೆಯಲಾರೆವು ಮಾವಯ್ಯಾ" ಎಂದನು.

ಅದನ್ನು ಕೇಳಿ ಕುಬ್ಜ ಮಂತ್ರವಾದಿ ಕಟುಮೋರೆ ಮಾಡಿ, "ಮರೆತುಬಿಡು! ನನ್ನನ್ನೂ ನಾನು ಮಾಡಿದ ಉಪಕಾರವನ್ನೂ ಮರೆತುಬಿಡು! ನನ್ನ ಸಂಗತಿಯನ್ನು ಯಾರಿಗೂ ಹೇಳಕೂಡದು. ಎಂದಿಗೂ ನನ್ನ ಹತ್ತಿರ ಬರಕೂಡದು. ಈ ಅರಣ್ಯದಲ್ಲಿ ಕಳ್ಳಕಪಟವರಿಯದ ಆಡವಿಯವರ ನಡುವೆ ನನ್ನನ್ನು ಪ್ರಶಾಂತವಾಗಿ ಬದುಕಲು ಬಿಟ್ಟು ಸುಮ್ಮನಿದ್ದುಬಿಡು. ಇನ್ನು ಹೋಗು!" ಎಂದ ಕುಬ್ಜ ಮಾಂತ್ರಿಕ ಆಜ್ಞಾಪಿಸುವ ಹಾಗೆ.

ಶೌರಿರಾಜನು ಮನೆಗೆ ಹಿಂದಿರುಗಿ ಬಂದು ಮಾಂತ್ರಿಕನು ಕೊಟ್ಟ ಪೇರಳೇ ಹಣ್ಣನ್ನು ವೀಣಾವತಿಗೆ ಕೊಟ್ಟನು. ಆ ಹಣ್ಣನ್ನು ತಿಂದ ಮೇಲೆ ಅವಳ ಕರೀ ಛಾಯೇ ಪೂರ್ತಿ ಹೋಗಿ ಮೊದಲಿನಂತೆಯೇ ಆದಳು.

ಮರುದಿನ ಈ ಮೊದಲು ಇಟ್ಟ ಮುಹೂರ್ತಕ್ಕೆ ತಪ್ಪದೆ ವೀಣಾ-ಶೌರಿರಾಜರ ಮದುವೆ ಜಾಂ ಜಾಂ ಎಂದು ನಡೆಯಿತು.



# ದುಡುಕುತನ

ಸುರೇಂದ್ರನೆಂಬ ರಾಜನು ತನ್ನ ಕುಮಾರನ ವಿದ್ಯಾಭ್ಯಾಸಕ್ಕಾಗಿ ಶ್ರೀಕರ್ಣನೆಂಬ ಗುರುವಿನ ಗುರುಕುಲಕ್ಕೆ ಕಳುಹಿಸಿಕೊಟ್ಟನು.

ಒಂದು ವರ್ಷದ ಮೇಲೆ ಸುರೇಂದ್ರನು ಗುರುಕುಲವನ್ನು ನೋಡಲು ಹೋದನು. ಅಲ್ಲಿ ತನ್ನ ಕುಮಾರನ ವಿದ್ಯಾಭ್ಯಾಸವು ತೃಪ್ತಿಕರವಾಗಿಲ್ಲವೆಂದು ಅವನಿಗೆ ತೋರಿತು.

ಆ ವಿಷಯವನ್ನು ಶ್ರೀಕರ್ಣನೊಂದಿಗೆ ಪ್ರಸ್ತಾಪಿಸುತ್ತಾ, "ಗುರುವರ್ಯಾ, ನೀವು ನಮ್ಮ ಕುಮಾರನ ವಿದ್ಯಾಭ್ಯಾಸವು ಬೇಗನೆ ಮುಗಿಯುವಂತೆ ಮಾಡಲಾರಿರಾ ? ಅವನು ಕಲಿಯುವುವೆಲ್ಲಾ ಎರಡು ಮೂರು ವರ್ಷಗಳೊಳಗೆ ಮುಗಿದು ಹೋದರೆ ಚೆನ್ನಾಗಿರುತ್ತದೆ" ಎಂದನು.

ಅದಕ್ಕೆ ಶ್ರೀಕರ್ಣನು, ಅಲ್ಲಿಯೇ ಒಂದು ವಿದ್ಯಾಭವನದ ನಿರ್ಮಾಣಕ್ಕಾಗಿ ತರಿಸಿ ರಾಶಿಹಾಕಿದ್ದ ಕಲ್ಲು ಜಲ್ಲಿ ಮುಂತಾದುವನ್ನು ರಾಜನಿಗೆ ತೋರಿಸಿ, "ಮಹಾರಾಜಾ, ಈ ಮೂಲ ವಸ್ತು ಸಾಮಗ್ರಿಗಳನ್ನು ಉಪಯೋಗಿಸಿ ಎಲ್ಲಾ ಸೌಕರ್ಯಗಳಿರುವ ಜೀವಿತದ ಕಟ್ಟಡ ನಿರ್ಮಾಣಕ್ಕೆ ಕಡೇ ಪಕ್ಷ ಒಂದು ವರ್ಷವಾದರೂ ಹಿಡಿಯಬಹುದು. ಅದರ ಬದಲಿಗೆ ಒಂದು ಗುಡಿಸಲು ಕಟ್ಟಲಿಕ್ಕೆ ನಾಲ್ಕೈದು ದಿನಗಳೇ ಸಾಕಾಗುತ್ತದೆ. ಆದರೆ ನಮ್ಮ ಪದವಿ ಪರಿಸ್ಥಿತಿಗಳಿಗೆ ಸರಿಯಾಗುವಂತಹುದು ಒಲೆ ಗುಡಿಸಲೋ, 'ಒಳ್ಳೆಯ ಭವನವೋ ಎಂಬುದನ್ನು ನಾವು ಮೊದಲು ನಿರ್ಣಯಿಸಿಕೊಳ್ಳಬೇಕು" ಎಂದನು.

ಆ ಮಾತು ಕೇಳಿದ ಮೇಲೆ ರಾಜನಿಗೆ ತನ್ನ ದುಡುಕುತನವು ಅರ್ಥವಾಯಿತು. ಅವನು ತನ್ನ ಕುಮಾರನ ವಿದ್ಯಾಭ್ಯಾಸವು ಉಳಿದ ವಿದ್ಯಾರ್ಥಿಗಳೊಂದಿಗೆ ನಡೆಯುವ ಹಾಗೆಯೇ ನಡೆಯಬೇಕೆಂದು ಹೇಳಿದನು. ಸರಿಯಾದ ಉದಾಹರಣೆ ಹೇಳಿದ ಗುರುವನ್ನು ಶ್ಲಾಘಿಸಿ, ಸನ್ಮಾನಿಸಿ ಅಲ್ಲಿಂದ ಹಿಂದಿರುಗಿದನು.





# ಚಾಣಕ್ಯನ ಕಥೆ

(ಕಳೆದ ಸಂಚಿಕೆಯಿಂದ ಮುಂದುವರಿದುದು)

ಚಾಣಕ್ಯ ಚಂದ್ರಗುಪ್ತರು ನಂದನ ರಾಜಭವನವನ್ನು ವಶಪಡಿಸಿಕೊಂಡು ಅಲ್ಲಿರುವ ಸೊತ್ತುಗಳನ್ನೆಲ್ಲಾ ಪರ್ವತನಿಗೂ ತಮಗೂ ಸಮನಾಗಿ ಹಂಚಿಕೊಂಡರು. ಆ ಭವನದೊಳಗೆ ಒಬ್ಬಳು ಸುಂದರಿಯಾದ ದಾಸಿ ಇದ್ದಳು. ಅವಳಿಗೆ ವಿಷ ಸೇವನೆಯಲ್ಲಿ ಅಭ್ಯಾಸವಾಗಿತ್ತು. ಆ ದಾಸಿಯನ್ನು ತನಗೆ ಕೊಡುವಂತೆ ಪರ್ವತನು ಕೇಳಿದನು. ಚಾಣಕ್ಯನು ಅದಕ್ಕೆ ಅಂಗೀಕಾರವಿತ್ತನು. ಅಗ್ನಿಸಾಕ್ಷಿಯಾಗಿ ಪರ್ವತನು ಅವಳನ್ನು ವಿವಾಹ ಮಾಡಿಕೊಳ್ಳುವಾಗ ಪರ್ವತನು ಅವಳ ಪಾಣಿಗ್ರಹಣ ಮಾಡಿದ್ದೇ ತಡ, ಅವಳ ಕೈಯಲ್ಲಿದ್ದ ಬೆವರಿನ ಮೂಲಕ ವಿಷವು ಪರ್ವತನ ಶರೀರದಲ್ಲಿ ಪ್ರವೇಶಿಸಿತು. ಅವನು ನಡುಗಿ ತಳ್ಳಾಡಿ ಬೀಳುತ್ತ ವೈದ್ಯರನ್ನು ಕರೆಯಲು ನೋಡುವಾಗ ಚಾಣಕ್ಯನು ಬೇಡವೆಂದು ಅವನನ್ನು ತಡೆದನು.

ಅರ್ಧ ರಾಜ್ಯವನ್ನು ಪಡೆಯಬೇಕಾಗಿದ್ದ ಪರ್ವತನು ವೈದ್ಯರ ಚಿಕಿತ್ಸೆಗೂ ಪ್ರಾಪ್ತಿಯಿಲ್ಲದೆ ಪ್ರಾಣಬಿಟ್ಟನು. ಆದರ ಮೇಲೆ ಪರ್ವತನ ರಾಜ್ಯ ಕೂಡಾ ಚಂದ್ರಗುಪ್ತನದೇ ಆಯಿತು.

ನಂದನ ಪರಿಪಾಲನೆಯೇನೋ ಅಂತ್ಯವಾಯಿತಾದರೂ, ನಂಧನ ಅನುಚರರು ಬಗೆಬಗೆಯ ಅರಾಜಕ ಕೃತ್ಯಗಳನ್ನು ಮಾಡುತ್ತ ಪರಿಪಾಲನೆಯಲ್ಲಿ ಶಾಂತಿ ಇಲ್ಲದಂತೆ ಕಿರುಕುಳವೆಬ್ಬಿಸಿಕೊಂಡೇ ಇದ್ದರು. ಅಂಥವರನ್ನೆಲ್ಲಾ ಅಡಗಿಸಿ ಹದ್ದಿನಲ್ಲಿ ಇಟ್ಟುಕೊಳ್ಳಲು ತಕ್ಕವನಾದ ಒಬ್ಬ ಜಾಡರವನು ಚಾಣಕ್ಯನ ದೃಷ್ಟಿಗೆ ಬಿದ್ದನು. ಈ ಜಾಡನು ತನ್ನ ಮನೆಯಲ್ಲಿ ಗೆದ್ದಲಿನ ಹುತ್ತ ಕಂಡಾಗಲೆಲ್ಲಾ ಬೆಂಕಿ ಹಚ್ಚುವುದನ್ನು ಚಾಣಕ್ಯನು ಗಮನಿಸಿದನು.

ಚಾಣಕ್ಯನು ಅವನನ್ನು ದಂಡನಾಧಿಕಾರಿಯಾಗಿ ಮಾಡಿಬಿಟ್ಟನು. ಆಮೇಲೆ ಅರಾಜಕ ಕೃತ್ಯ ಮಾಡುವವರನ್ನೆಲ್ಲಾ ಈ ಜಾಡನು ಬೇಗದಲ್ಲೇ ಕಂಡುಹಿಡಿದು ನಾಶಗೊಳಿಸಿ ಅವರ ಹುಟ್ಟಡಗುವಂತೆ ಮಾಡಿದನು. ಚಾಣಕ್ಯನಿಗೆ ಅವನ ಮೇಲೆ ಉಂಟಾದ ವಿಶ್ವಾಸವು ಫಲದಾಯಕವೇ ಆಯಿತು.

ಅಂತೂ ಚಂದ್ರಗುಪ್ತನು ರಾಜನಾಗಿ ಬಂದನೇನೋ ಸರಿ. ಆದರೆ ಕೋಶಾಗಾರದಲ್ಲಿ ಹಣವಿರಲಿಲ್ಲ. ಈ ಕೊರತೆಯನ್ನು ಭರ್ತಿ ಮಾಡಲಿಕ್ಕಾಗಿ ಚಾಣಕ್ಯನು ಕಳ್ಳದಾಳಗಳಿಂದ ಬಂಗಾರವನ್ನು ಪಣವಾಗಿ ಒಡ್ಡಿ

ಜೂಜಾಡಿ ಸ್ವಲ್ಪ ಬಂಗಾರವನ್ನು ಗಳಿಸಿಕೊಂಡನು. ಈ ರೀತಿಯಾಗಿ ಕೋಶಾಗಾರವನ್ನು ತುಂಬಿಸಲು ಸಾಧ್ಯವಿಲ್ಲವೆಂದು ತೋರಿತು. ಚಾಣಕ್ಯನು ಒಂದು ಯುಕ್ತಿಯನ್ನು ತೆಗೆದನು. ಅವನು ನಗರದೊಳಗಿನ ಧನಿಕರನ್ನೆಲ್ಲಾ ಔತಣಕ್ಕೆ ಕರೆದು, ಭರ್ಜರಿ ಊಟವಾದ ಮೇಲೆ ಪುಷ್ಕಳವಾಗಿ ಕುಡಿಯಲು ಕೊಟ್ಟನು. ಎಲ್ಲರೂ ಕುಡಿದು ಆನಂದದ ಮಯಕದಲ್ಲಿರುವಾಗ ಚಾಣಕ್ಯನು ಎದ್ದುನಿಂತು, ತಾನು ಎಂತಹ ಅದೃಷ್ಟಶಾಲಿಯೋ, ರಾಜನು ಹೇಗೆ ತನ್ನ ಅಂಗೈಯ ಬೊಂಬೆಯಾಗಿರುವನೋ ಎಂಬುದನ್ನು ವಿವರಿಸುವ ಒಂದು ಶ್ಲೋಕವನ್ನು ರಾಗವಾಗಿ ಹೇಳಿದನು. ಕೂಡಲೇ ಉಳಿದವರು ಕೂಡಾ ತಮ್ಮ ತಮ್ಮ ದೊಡ್ಡಸ್ತಿಕೆಯನ್ನು ಹೇಳಿಕೊಂಡು ಯಾರ ಹತ್ತಿರ ಎಷ್ಟೆಷ್ಟು ಧನವಿರುವುದೋ ಅದನ್ನೆಲ್ಲ ಹೇಳಿ ಹೊರಗೆ ಹಾಕಿದರು. ಚಾಣಕ್ಯನು ಅಂದುಕೊಂಡ ಫಲಿತ ದೊರೆಯಿತು. ಅವನು ಅವರ ಬೊಕ್ಕಸಗಳನ್ನು ಕೊಳ್ಳೆ ಹೊಡೆಯಿಸಿ ರಾಜನ ಕೋಶಾಗಾರವನ್ನು ತುಂಬಿಸಿಬಿಟ್ಟನು.

ಹಾಗಿರುವಾಗ ಚಂದ್ರಗುಪ್ತನ ರಾಜ್ಯದಲ್ಲಿ ಒಂದು ಸಾರಿ ದೊಡ್ಡ ಬರಗಾಲವು ಬಂದಿತು. ರಾಜಧಾನಿಯಲ್ಲಿರುವ ಜೈನ ಸನ್ಯಾಸಿಗಳಿಗೆ ಭಿಕ್ಷೆ ದೊರೆಯದೆ ಹೋಯಿತು, ಅವರ ಆಚಾರ್ಯನಾದ ಸುಸ್ಥಿತನು ತನ್ನ ಶಿಷ್ಯರನ್ನು ನೋಡಿ, "ನೀವೆಲ್ಲಾ ನಗರ ಬಿಟ್ಟು ಹೋಗಿ ಎಲ್ಲಿಯಾದರೂ ಭಿಕ್ಷೆ ಹಾಕಿಸಿಕೊಂಡು ಬದುಕಿರಿ" ಎಂದು ಹೇಳಿ ಕಳುಹಿಸಿಬಿಟ್ಟನು. ಎಲ್ಲ ಶಿಷ್ಯರೂ ಹೊರಟುಹೋಗುವಾಗ, ಇಬ್ಬರು ಮಾತ್ರ ಗುರುವನ್ನು ಬಿಟ್ಟು ಹೋಗಲು ಒಪ್ಪಲಿಲ್ಲ. ಅವರು ತಿಂಡಿಗಾಗಿ ಒಂದು ಉಪಾಯ ಮಾಡಿದರು. ಅವರಿಗೆ ಒಂದು ಬಗೆಯ ಅಂಜನವು ಗೊತ್ತಿದ್ದಿತು. ಅದನ್ನು ಕಣ್ಣಿಗೆ ಹಚ್ಚಿಕೊಂಡು ಬಿಟ್ಟರೆ ಇತರರ ಕಣ್ಣಿಗೆ ತಾವು ಕಾಣುವುದಿಲ್ಲ. ಆ ಶಿಷ್ಯರಿಬ್ಬರೂ ಆ ಮಾಯದ



ಅಂಜನವನ್ನು ಕಣ್ಣಿಗೆ ಹಚ್ಚಿಕೊಂಡು ಅದೃಶ್ಯರಾಗಿ ರಾಜಗೃಹದೊಳಗೆ ಪ್ರವೇಶಿಸಿ ಚಂದ್ರಗುಪ್ತನ ಊಟದ ಬಟ್ಟಲಿನ ಮುಂದೆಯೇ ಕುಳಿತುಕೊಂಡು ಸದ್ದಾಗದಂತೆ ಊಟಮಾಡಿ ಹೊರಟುಹೋಗಿ ಬಿಡುತ್ತಿದ್ದರು.

ಹೀಗೆ ಸ್ವಲ್ಪಕಾಲ ಕಳೆದ ಮೇಲೆ ಚಂದ್ರಗುಪ್ತನು ಸೊರಗಿ ಹೋಗಿರುವುದನ್ನು ನೋಡಿ, ಏನೋ ಸಂದೇಹಪಡುತ್ತ ಕಾರಣವೇನೆಂದು ಚಂದ್ರಗುಪ್ತನನ್ನು ಕೇಳಿದನು ಚಾಣಕ್ಯ.

"ಅದೇನು ಕಾರಣವೆಂದು ನನಗೂ ತಿಳಿಯದು. ದಿನಾ ನನಗೆ ಎಂದಿನಂತೆ ಭೋಜನ ಪದಾರ್ಥಗಳನ್ನು ಬಡಿಸುತ್ತಾರೆ. ಅದೆಲ್ಲಾ ಸರಿಯಾಗಿ ನನ್ನ ಹೊಟ್ಟೆಗೆ ಹೋಗುವುದಿಲ್ಲವೆಂಬುದಷ್ಟೇ ನನಗೆ ಗೊತ್ತಾಗುತ್ತದೆ. ಬಟ್ಟಲಿನಲ್ಲಿದ್ದ ಊಟದ ಪದಾರ್ಥಗಳು ಹೇಗೋ ಬೇಗನೇ ಮುಗಿದುಹೋಗುತ್ತವೆ" ಎಂದನು ಚಂದ್ರಗುಪ್ತ.



ಯಾರೋ ಅದೃಶ್ಯ ರೂಪದಲ್ಲಿ ಬಂದು ಚಂದ್ರಗುಪ್ತನ ಆಹಾರ ಪದಾರ್ಥಗಳನ್ನು ತಸ್ಕರಿಸುವರೆಂದು ಚಾಣಕ್ಯನಿಗೆ ಅನುಮಾನವಾಯಿತು. ಅದನ್ನು ಪರೀಕ್ಷಿಸಲಿಕ್ಕಾಗಿ ಚಾಣಕ್ಯನು ಚಂದ್ರಗುಪ್ತನ ಭೋಜನ ಶಾಲೆಯೊಳಗೆಲ್ಲಾ ಮೆತ್ತಗಿನ ಪುಡಿಯನ್ನು ಚೆಲ್ಲಿದನು. ಚಂದ್ರಗುಪ್ತನ ಭೋಜನವಾದ ಮೇಲೆ ಆ ಸ್ಥಳದಲ್ಲಿ ನೋಡಿದಾಗ, ಆ ಪುಡಿಯಲ್ಲಿ ಯಾರದೋ ಅಪರಿಚಿತರ ಪಾದದ ಗುರುತು ಬಿದ್ದಿರುವುದು ಕಾಣಿಸಿತು.

ಮರುದಿನ ಚಂದ್ರಗುಪ್ತನು ಭೋಜನ ಮಾಡುವ ಸಮಯದಲ್ಲಿ ಚಾಣಕ್ಯನು ಭೋಜನ ಶಾಲೆಯಲ್ಲಿ ಘಾಟಾದ ಹೊಗೆಯೇಳುವಂತೆ ಮಾಡಿದನು. ಆ ಹೊಗೆಯಿಂದ ಎಲ್ಲರ ಕಣ್ಣುಗಳೂ ಉರಿಯ ತೊಡಗಿ ದಳದಳನೆ ಕಣ್ಣೀರು ಇಳಿಯ ತೊಡಗಿತು. ಆ ನೀರಿನಿಂದ ಆಹಾರ ತಿನ್ನಲು ಬಂದ ಜೈನ ಯುವಕರ ಕಣ್ಣಿನ ಅಂಜನವು ಕರಗಿಹೋಗಿ ಅವರಿಬ್ಬರೂ ಎಲ್ಲರಿಗೂ ಕಾಣಿಸಿದರು. ಇದ್ದಕ್ಕಿದ್ದ ಹಾಗೆ ಆ ಹೊಸ ಅತಿಥಿಗಳನ್ನು ನೋಡಿ ಎಲ್ಲರೂ ಮೊದಲು ಬೆರಗಾಗಿ, ಆ ಮೇಲೆ ಕೋಪಗೊಂಡರು. ಆಗ ಚಾಣಕ್ಯನು ಆ ಜೈನ ಸನ್ಯಾಸಿಗಳಿಗೆ ಒಂದು ನಮಸ್ಕಾರ ಮಾಡಿ, ಬಹಳ ಮರ್ಯಾದೆಯಿಂದ ಹೊರಗೆ ಕಳುಹಿಸಿದನು. ಇತರರ ಎಂಜಲು ತಿಂದೆನೆಂದು ಚಂದ್ರಗುಪ್ತನು ನೊಂದುಕೊಳ್ಳುತ್ತಿರುವಾಗ, ಅವರಿಗೆ ಭಿಕ್ಷೆ ಹಾಕಿದ ಪುಣ್ಯವು ನಿನಗೆ ಲಭಿಸಿತೆಂದು ಚಾಣಕ್ಯನು ಅವನನ್ನು ಸಮಾಧಾನಪಡಿಸಿದನು. ಆಮೇಲೆ ಚಾಣಕ್ಯನು ಆಚಾರ್ಯನಿಗೆ ಸುದ್ದಿ ಕಳುಹಿಸಿ, ಆತನ ಶಿಷ್ಯರು ಮಾಡಿದ ಹೀನ ಕಾರ್ಯಕ್ಕೆ ಆಕ್ಷೇಪಣೆ ತಿಳಿಸಿದನು.

"ತಪ್ಪು ನಿಮ್ಮ ಪೌರರದೇ. ಅವರು ಸನ್ಯಾಸಿಗಳಿಗೆ ಭಿಕ್ಷೆ ಹಾಕದ ಕಾರಣದಿಂದ ಹೀಗಾಯಿತು. ಊರೊಳಗೆ ಭಿಕ್ಷೆ ದೊರಕುತ್ತಿದ್ದರೆ ಅವರೇಕೆ ಹೀಗೆ ಮಾಡುತ್ತಾರೆ?" ಎಂದು ಆಚಾರ್ಯನು ಉತ್ತರ ಹೇಳಿ ಕಳುಹಿಸಿದನು.

ಅಂದಿನಿಂದ ಪಾಟಲೀಪುತ್ರದಲ್ಲಿ ಜೈನ ಸನ್ಯಾಸಿಗಳಿಗೆ ತಪ್ಪದೆ ಭಿಕ್ಷೆ ಲಭಿಸುವಂತಹ ಏರ್ಪಾಡುಗಳಾದುವು.

ಚಂದ್ರಗುಪ್ತನ ಮೇಲೆ ಯಾರಾದರೂ ವಿಷ ಪ್ರಯೋಗಮಾಡುವರೇನೋ ಎಂಬ ಸಂದೇಹವು ಚಾಣಕ್ಯನಿಗೆ ಬಂದುದರಿಂದ, ಅವನ ಆಹಾರದಲ್ಲಿ ಸ್ವಲ್ಪ ಸ್ವಲ್ಪವಾಗಿ ವಿಷ ಬೆರೆಸುವಂತೆ ಆಜ್ಞೆ ಮಾಡಿದನು. ಆ ವಿಷದ ಅಳತೆ ಬರಬರುತ್ತ ಹೆಚ್ಚುತ್ತಾ ಹೋದುದರಿಂದ, ಚಂದ್ರಗುಪ್ತನಿಗೆ ಯಾವ ವಿಷವೂ ಏನೂ ಮಾಡದಂತಹ ಸ್ಥಿತಿ ಏರ್ಪಟ್ಟಿತು.

ಈ ಸಂಗತಿ ಚಂದ್ರಗುಪ್ತನಿಗೆ ಗೊತ್ತೇ ಆಗಲಿಲ್ಲ. ಹೀಗಾದುದರಿಂದ ಒಂದು ಆಚಾತುರ್ಯವು ನಡೆದುಹೋಯಿತು.

ತುಂಬಿದ ಬಸಿರಿಯಾಗಿದ್ದ ದುರ್ಧರೆ ಒಂದು ದಿನ ಚಂದ್ರಗುಪ್ತನ ಭೋಜನ ತಟ್ಟೆಯ ಮುಂದೆ ಕುಳಿತುಕೊಂಡು, ಅವನ ಆಹಾರ ಪದಾರ್ಥಗಳಲ್ಲಿ ಸ್ವಲ್ಪ ತೆಗೆದು ತಿಂದಳು. ಅದು ತುಂಬಾ ವಿಷ ಪೂರಿತವಾಗಿದ್ದುದರಿಂದ ಸ್ವಲ್ಪ ಹೊತ್ತಿಗೆಲ್ಲಾ ದುರ್ಧರೆ ಬಿದ್ದು ಪ್ರಾಣ ಬಿಟ್ಟಳು. ಆ ಕ್ಷಣದಲ್ಲೇ ಅಲ್ಲಿಗೆ ಬಂದ ಚಾಣಕ್ಯನು ನಡೆದ ಅಪಾಯವನ್ನು ತಿಳಿದು, ಆಗಲೇ ಪ್ರಾಣಬಿಟ್ಟ ದುರ್ಧರೆಯ ಗರ್ಭವನ್ನು ಸೀಳಿಸಿ ಅದರಿಂದ ಶಿಶುವನ್ನು ಹೊರಗೆಳೆದನು. ಆಗಲೇ ಒಂದು ಬಿಂದು ವಿಷ ಶಿಶುವಿನೊಳಗೆ ಪ್ರವೇಶಿಸಿತ್ತು. ಆದರೆ ಅದರಿಂದ ಶಿಶುವಿಗೆ ಯಾವ ಅಪಾಯವೂ ಆಗಲಿಲ್ಲ. ಆ ಕಾರಣದಿಂದ ಆ ಶಿಶುವಿಗೆ ಬಿಂದುಸಾರನೆಂದು ಹೆಸರಿಟ್ಟರು.

ಚಂದ್ರಗುಪ್ತನು ತೀರಿಹೋದ ಮೇಲೆ ಚಾಣಕ್ಯನು ಬಿಂದುಸಾರನಿಗೆ ತಾನೇ ಸ್ವತಃ ಪಟ್ಟಾಭಿಷೇಕ ಮಾಡಿದನು. ಆದರೆ ಚಾಣಕ್ಯನು ಒಬ್ಬ ಹಿತ ಶತ್ರುವಿನಿಂದಾಗಿ ಬಿಂದುಸಾರನಿಗೆ ಬಹಳ ಕಾಲ ಮಂತ್ರಿಯಾಗಿರಲಿಲ್ಲ.

ಚಾಣಕ್ಯನು ಸುಬಂಧು ಎಂಬವನನ್ನು ತನ್ನ ಬಳಿಯಲ್ಲಿಟ್ಟುಕೊಂಡು, ಅವನಿಗೆ ರಾಜಕೀಯ ತಂತ್ರ ಗಳನ್ನೆಲ್ಲಾ ಕಲಿಸಿ ತನ್ನ ಅನುಚರನನ್ನಾಗಿ ಮಾಡಿ ಕೊಂಡಿದ್ದನು. ಅವನು ಬಿಂದುಸಾರನೊಂದಿಗೆ, ಚಾಣಕ್ಯ ನನ್ನು ಎಷ್ಟುಮಾತ್ರಕ್ಕೂ ನಂಬಬಾರದೆಂದೂ, ಅವನು ಬಿಂದುಸಾರನ ತಾಯಿಯ ಗರ್ಭವನ್ನು ಸೀಳಿದವ ನೆಂದೂ ಹೇಳಿದನು. ಹೀಗೆ ಚಾಡಿ ಹೇಳಲು ಕಾರಣ, ಅವನಿಗೆ ಮಂತ್ರಿ ಪದವಿಯ ಮೇಲೆ ಬಂದ ಆಶೆಯೇ. ಅವನ ಮಾತು ಕೇಳಿ ಬಿಂದುಸಾರನು ವಿಚಾರಿಸಲು ಅದೆಲ್ಲ ನಿಜವೇ ಎಂದು ಗೊತ್ತಾಯಿತು. ಅದರಿಂದ ಬಿಂದುಸಾರನಿಗೆ ಚಾಣಕ್ಯನ ಮೇಲೆ ಎಲ್ಲೆ ಇಲ್ಲದಷ್ಟು ಕೋಪವೆದ್ದಿತು. ಕೋಪವನ್ನು ಚಾಣಕ್ಯನ ಮುಂದೆಯೇ ತೋರಿಸಿ ನಿಂದಿಸಿದನು.



ತನ್ನ ಪ್ರತಿಸ್ಪರ್ಧಿ ಜಯಿಸಿದನೆಂದು ತಿಳಿದು ಚಾಣಕ್ಯನಿಗೆ ತನ್ನ ಭವಿಷ್ಯತ್ತಿನ ಮೇಲೆ ಅಪಾರ ವಾದ ವೈರಾಗ್ಯವೆದ್ದಿತು. ಆದರೆ ಆ ಪ್ರತಿಸ್ಪರ್ಧಿ ಯನ್ನು ಮಾತ್ರ ಅವನು ಕ್ಷಮಿಸಲಿಲ್ಲ. ಸುಬಂಧು ವಿನ ಪತನಕ್ಕಾಗಿ ಚಾಣಕ್ಯನು ಒಂದು ಪ್ರಯೋಗ ಮಾಡಿದನು. ಅವನು ಭೂರ್ಜ ಪತ್ರಗಳ ಮೇಲೆ ಏನನ್ನೋ ಬರೆದು ಆ ಪತ್ರಗಳನ್ನೂ, ಸುಗಂಧ ದ್ರವ್ಯಗಳನ್ನೂ ಒಂದು ಅಂದವಾದ ಪೇಟಿಕೆಯಲ್ಲಿರಿಸಿ, ಆ ಪೇಟಿಕೆಯನ್ನು ತನ್ನ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟು ಬೀಗ ಹಾಕಿದನು. ಅನಂತರ ಅವನು ತನ್ನ ಧನ ಮೊದಲಾದ ಎಲ್ಲಾ ಆಸ್ತಿಗಳನ್ನೂ ಬಡಬಗ್ಗರಿಗೆ ದಾನಮಾಡಿ, ಊರ ಹೊರಗಿದ್ದ ಕಸಗುಪ್ಪೆಗಳ ಮೇಲೆ ಕುಳಿತು ಪ್ರಾಯೋಪವೇಶ ಮಾಡಲು ತೊಡಗಿದನು.

ಇದರಿಂದಾಗಿ ಬಿಂದುಸಾರನಿಗೆ ಚಾಣಕ್ಯನನ್ನು ಕುರಿತು ವಾಸ್ತವ ಸಂಗತಿ ಗೊತ್ತಾಯಿತು. ಅವನು

ಬಹಳ ಪಶ್ಚಾತ್ತಾಪಪಟ್ಟು, ಚಾಣಕ್ಯನ ಬಳಿಗೆ ಹೋಗಿ, ತನ್ನ ಅಪರಾಧವನ್ನು ಕ್ಷಮಿಸಿ, ಬಂದು ಮಂತ್ರಿ ಪದವಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿಕೊಂಡನು.

ಆದರೆ ಚಾಣಕ್ಯನು ತನ್ನ ದೀಕ್ಷೆಯನ್ನು ಬಿಡಲಿಲ್ಲ. ಬಿಂದುಸಾರನು ಹಿಂದಿರುಗಿ ತನ್ನ ಕೋಪವನ್ನೆಲ್ಲಾ ಸುಬಂಧುವಿನ ಮೇಲೆ ತೋರಿಸಿಕೊಂಡನು. ಸುಬಂಧು ತಾನು ನಿರ್ದೋಷಿ ಎಂದೂ, ಚಾಣಕ್ಯನ ಮನಸ್ಸನ್ನು ಮಾರ್ಪಡಿಸಿ ಕರೆತರುವೆನೆಂದೂ ರಾಜನೊಂದಿಗೆ ಹೇಳಿದನು.

ಹೇಳಿದಂತೆಯೇ ಅವನು ಚಾಣಕ್ಯನ ಬಳಿಗೆ ಹೋಗಿ ಏನೋ ಅನುನಯದ ಮಾತುಗಳನ್ನು ಮಾತಾಡುತ್ತ, ಬೂದಿಮುಚ್ಚಿದ ಕೆಂಡವೊಂದನ್ನು ಆ ಕಸಗುಪ್ಪೆಯ ಮೇಲೆ ಜಾರಿಸಿ ಹೋಗಿಬಿಟ್ಟನು. ಆದರಿಂದ ಕಸಗುಪ್ಪೆ ರಾಶಿ ಬೆಂಕಿ ಹಿಡಿದು ಉರಿಯತೊಡಗಿತು. ಚಾಣಕ್ಯನು ಆ ಬೆಂಕಿಯಲ್ಲೇ ಸುಟ್ಟು ಬೂದಿಯಾಗಿ ಹೋದನು.

ಬಿಂದುಸಾರನ ಅನುಮತಿಯಿಂದ ಸುಬಂಧು ಚಾಣಕ್ಯನ ಮನೆಯನ್ನು ಪ್ರವೇಶಿಸಿ ಧನಕ್ಕಾಗಿ ಮನೆ ಪೂರಾ ಹುಡುಕುವಾಗ ಚಾಣಕ್ಯನ ದೊಡ್ಡ ಪೆಟ್ಟಿಗೆಯಲ್ಲಿರುವ ಪೇಟಿಕೆ ಹೊರಬಿದ್ದಿತು. ಅದನ್ನು ತೆರೆದ ಕೂಡಲೇ ಗುಪ್ಪೆಂದು ಸುವಾಸನೆ ಮೇಲೆದ್ದು ಬಂದಿತು. ಆಗಲೇ ಅವನಿಗೆ ಭೂರ್ಜ ಪತ್ರಗಳು ಕಾಣಿಸಿದುವು. ಚಾಣಕ್ಯನ ಧನಕ್ಕೆ ಸಂಬಂಧಪಟ್ಟ ರಹಸ್ಯಗಳು ಅದರಲ್ಲಿವೆಯೆಂದುಕೊಂಡು ಸುಬಂಧು ಅವುಗಳನು ಓದಿ ಬೆಪ್ಪು ಬಡೆದಂತಾದನು. ಸನ್ಯಾಸಿಯಾಗದಿರುವವರು ಈ ಸುಗಂಧದ ವಾಸನೆಯಿಂದ ಸಾಯುವರೆಂದು ಭೂರ್ಜ ಪತ್ರಗಳಲ್ಲಿ ಬರೆಯಲ್ಪಟ್ಟಿತ್ತು. ಅದು ನಿಜವೋ ಅಲ್ಲವೋ ತಿಳಿಯಲಿಕ್ಕಾಗಿ ಅವನು ಆ ಸುಗಂಧವನ್ನು ಒಬ್ಬ ಮನುಷ್ಯನಿಗೆ ಬಲವಾಗಿ ವಾಸನೆ ತೋರಿಸಿದನು. ಅವನು ತಲೆತಿರುಗಿ ಬಿದ್ದು ಪ್ರಾಣಬಿಟ್ಟನು. ಅವನಿಗೆ ಎಷ್ಟು ಪ್ರತಿರೋಧದ ಮದ್ದು ಕೊಟ್ಟರೂ ಪ್ರಯೋಜನವಾಗಲಿಲ್ಲ. ಈ ಮೊದಲೇ ಆ ವಾಸನೆ ಹೀರಿದ್ದ ತನಗೂ ಅದೇ ಗತಿ ಬರುತ್ತದೆಂದುಕೊಂಡು ಸುಬಂಧು ತನ್ನ ಮಂತ್ರಿ ಪದವಿಗೆ ಎಳ್ಳುನೀರು ಬಿಟ್ಟು ಜೈನ ಗುರುವಿನಿಂದ ಸನ್ಯಾಸ ದೀಕ್ಷೆ ಪಡೆದನು. ಅದು ಚಿತ್ತಶುದ್ಧಿಯಿಂದ ಪಡೆದ ದೀಕ್ಷೆಯಲ್ಲವೆಂದು ಚೆನ್ನಾಗಿ ತಿಳಿದಿದ್ದ ಇತರ ಸನ್ಯಾಸಿಗಳು ಅವನನ್ನು ಹೀನದೃಷ್ಟಿಯಿಂದ ನೋಡಿದರು.

ಚಾಣಕ್ಯನ ಮೇಲೆ ತಂತ್ರ ಸಾಧಿಸಿದ ಫಲಿತವು ಸುಬಂಧುವಿಗೆ ದಕ್ಕಲಿಲ್ಲ. ಚಾಣಕ್ಯನು ಸತ್ತು ಕೂಡಾ ತನ್ನ ಪ್ರತಿಸ್ಪರ್ಧಿಯ ಮೇಲೆ ಹಗೆಯನ್ನು ತೀರಿಸಿಕೊಂಡನು.



# ಟಾಸ್ಮಾನಿಯಾ ಕ್ರೂರ ಪ್ರಾಣಿಗಳು

ಆಸ್ಟ್ರೇಲಿಯಾದ ಆಗ್ನೇಯ ದಿಕ್ಕಿನಲ್ಲಿರುವ ಟಾಸ್ಮಾನಿಯಾ ದ್ವೀಪವು ಪ್ರಶಾಂತ ವಾತಾವರಣದಿಂದ ಬೆಳಗಿಕೊಂಡಿರುತ್ತದೆ. ಈ ಪ್ರಶಾಂತ ವಾತಾವರಣದಲ್ಲಿ ವಿಚಿತ್ರವಾದ ಕ್ರೂರ ಪ್ರಾಣಿಗಳು, ಟಾಸ್ಮಾನಿಯ ತೋಳಗಳು, ಟಾಸ್ಮಾನಿಯಾ ಡೆವಿಲ್, ಟೈಗರ್ ಕ್ಯಾಟ್ ವಾಸಿಸಿಕೊಂಡಿವೆ.

ಈ ಪ್ರಾಣಿಗಳಲ್ಲಿ ಟಾಸ್ಮಾನಿಯಾ ತೋಳವು ಆಕಾರದಲ್ಲಿ ದೊಡ್ಡದು. ಇದು ಬಹಳ ಅಪೂರ್ವವಾಗಿ ಕಾಣುತ್ತದೆ. ನೋಡಲು ಸಾಧಾರಣ ತೋಳದ ಹಾಗಿದ್ದರೂ ಅದಕ್ಕಿಂತ ಆಕಾರದಲ್ಲಿ ಚಿಕ್ಕದು. ಶರೀರದ ಮೇಲೆ ಚಾರೆಗಳಿರುತ್ತದೆ. ಹೆಣ್ಣು ತೋಳಗಳು ಸೊಂಟದ ಸುತ್ತಲೂ ತಿತ್ತಿಯಂತಿರುವ ಚರ್ಮದೊಳಗೆ ಮರಿಗಳನ್ನು ಹೊತ್ತುಕೊಳ್ಳುತ್ತವೆ. ಮರಿ ಹುಟ್ಟಿದಾಗಲೇ ಆ ಸಂಚಿಯೊಳಗೆ ಸೇರಿ ದೊಡ್ಡದಾಗುವವರೆಗೆ ಅಲ್ಲಿಯೇ ಇರುತ್ತದೆ. ಮರಿ ಇನ್ನೂ ಚಿಕ್ಕದಾಗಿರುವಾಗ ಅದರ ಬಾಯಿಯಲ್ಲಿ ಯಾವಾಗಲೂ ತಾಯಿಯ ಸ್ತನಾಗ್ರವು ಇರುತ್ತದೆ. ಆಮೇಲೆ ಮರಿಗೆ ಹಾಲು ಯಾವಾಗ ಬೇಕೆಂಬುದನ್ನು ತಿಳಿದು ತಾಯಿ ಅದಕ್ಕೆ ಆಗಾಗ ಹಾಲೂಡುತ್ತದೆ. ಗುಡ್ಡದ ಗುಹೆಗಳಲ್ಲಿರುತ್ತ, ರಾತ್ರಿ ಸಂಚಾರ ಹೊರಡುವ ಈ ತೋಳಗಳು ಒಂದು ಕಾಲದಲ್ಲಿ ಆಸ್ಟ್ರೇಲಿಯಾದೊಳಗೆಲ್ಲಾ ವ್ಯಾಪಿಸಿಕೊಂಡಿದ್ದುವು. ಪ್ರಸ್ತುತ ಟಾಸ್ಮಾನಿಯಾ ದ್ವೀಪದಲ್ಲೇ ಪರಿಮಿತವಾಗಿ ಹೋಗಿವೆ.

ಹೊಟ್ಟೆಯ ಕೆಳಗೆ ಸಂಚಿಯಿರುವ ಜಾತಿಗೆ ಸೇರಿದ ಮತ್ತೊಂದು ಮುಖ್ಯವಾದ ಪ್ರಾಣಿ ಟಾಸ್ಮಾನಿಯನ್ ಡೆವಿಲ್. ಇದು ನೋಡಲು ನೀರು ನಾಯಿಯ ಹಾಗೆ ಇರುತ್ತದೆ. ದೊಡ್ಡ ತಲೆ ಅಗಲವಾದ ಮೋರೆಯಿಂದ ಬಹಳ ಬಲಿಷ್ಠವಾದ ಪ್ರಾಣಿಯದು. ದೊಡ್ಡದಾದ ಗುಂಡಗಿನ ಕಿವಿಗಳಿಂದ, ಶರೀರ ತುಂಬಾ ರೋಮಗಳಿಂದ, ಕಪ್ಪು, ಊದಾ ಬಣ್ಣದಲ್ಲಿ, ಕುತ್ತಿಗೆಯಲ್ಲಿಯೂ, ಬೆನ್ನಿನ ಬುಡದಲ್ಲಿಯೂ ಬೆಳ್ಳಗಿನ ಮಚ್ಚೆಗಳಿಂದ ಇರುವ ಈ ಪ್ರಾಣಿ ರಾತ್ರಿಯಲ್ಲಿಯೇ ಆಹಾರಾನ್ವೇಷಣೆ ಸಾಗಿಸುತ್ತದೆ. ಸೂರ್ಯನ ಬೆಳಕಿನಲ್ಲಿ ಇವುಗಳಿಗೆ ಕಣ್ಣು ಕಾಣದು. ಆದುದರಿಂದ ಹಗಲೆಲ್ಲಾ ಕತ್ತಲು ಗವಿಯೊಳಗೆ, ಬಿಲಗಳೊಳಗೆ ಸುತ್ತಿಕೊಂಡು ಮಲಗಿರುತ್ತವೆ. ಇವು ಎಷ್ಟು ಕ್ರೂರ ಪ್ರಾಣಿಗಳಾಗಿದ್ದರೂ ಯಾವಾಗಲೂ ಆಡುತ್ತಾ, ಉಲ್ಲಾಸದಿಂದ ಕುಣಿಯುತ್ತಾ ಇರುವುದರಿಂದ ಇವುಗಳ ಮರಿಗಳನ್ನು ಕೆಲವರು ಬೆಳೆಸಿಕೊಳ್ಳುತ್ತಾರೆ.

ಟಾಸ್ಮಾನಿಯಾದಲ್ಲಿಯೂ, ಆಸ್ಟ್ರೇಲಿಯಾದಲ್ಲಿಯೂ ಮತ್ತೊಂದು ಕ್ರೂರ ಮೃಗವು ಟೈಗರ್ ಕ್ಯಾಟ್. ಇವು ಸಾಧಾರಣ ಬೆಕ್ಕುಗಳಂತೆಯೇ ಇರುತ್ತವೆ. ಇವುಗಳ ಹಲ್ಲುಗಳು ಬೆಕ್ಕುಗಳ ಹಾಗೆಯೇ ಇರುತ್ತವಾದರೂ, ದಂತಗಳು ಅಷ್ಟು ಬಲವಾಗಿಲ್ಲ. ಊದಾ ರಂಗಿನ ಶರೀರದ ತುಂಬಾ ಬಿಳಿ ಮಚ್ಚೆಗಳು ಇರುತ್ತವೆ. ಚಿಕ್ಕ ಕಿವಿಗಳು, ಉದ್ದವಾದ ಬಾಲ, ಶರೀರವೆಲ್ಲಾ ರೋಮಮಯವಾಗಿರುತ್ತದೆ.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

### ಗೆದ್ದ ಶೀರ್ಷಿಕೆಗಳು ೧೯೮೬ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. Natarajan



M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಮಾರ್ಚಿ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು.' ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಜನವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಮುಗ್ಧತೆಯ ಚಿಗುರಿಂತು

ಎರಡನೇ ಫೋಟೋ : ಹಿಗ್ಗುತಿದೆ ಬೆಳೆದಂತೆ

ಕಳುಹಿಸಿದವರು : ಸಿ. ಜಿ. ನಾಗರಾಜ, ಶ್ರೀ ಅರವಿಂದ ನಗರ, ಗೌರಿಬಿದನೂರು.

ಬಹುಮಾನ ರೂ. ೫೦/– ಈ ತಿಂಗಳ ಅಪ್ಪೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಕಮಾಂಡರ್ ಪೀರೀ. ೨. ಅಮುಂಡ್ಸೇನ್. ೩. ಎಬೆಲ್‌ಟಾಸ್ಮನ್. ೪ ಸರ್‌ಫ್ರಾನ್ಸಿಸ್ ಡ್ರೇಕ್. ೫. ವಿಕ್ಟೋರಿಯಾ ಜಲಪಾತ.

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.